

# ಕರ್ನಾಟಕದ ಕರಾವಳಿ

ಡಾ. ಕೆ. ಶಿವರಾಮ ಕಾರಂತ




ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು-೫೬೦ ೦೦೨

ಡಾ. ಕೆ. ಶಿವರಾಮ ಕಾರಂತ ಅವರಿಂದ ರಚಿಸಲ್ಪಟ್ಟ 'ಕರ್ನಾಟಕದ ಕರಾವಳಿ' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

KARNATAKADA KARAVALI—written in Kannada by Dr. K. Shivaram Karanth. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009.



ಬೆಲೆ ರೂ. ೨-೦೦

ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರಿ
ಬೆಂಗಳೂರು-೫೬೦ ೦೦೯

೧

ನಮ್ಮ ಭೂಮಿ ಬಹುಮಟ್ಟಿಗೆ ಸಾಗರಗಳಿಂದ ತುಂಬಿ ಕೊಂಡ ಭಾಗ; ಅದರ ಕಾಲಂಶವಷ್ಟೇ ನೀರಿಂದ ಮೇಲಕ್ಕೆ ಚಾಚಿ ಕೊಂಡ ನೆಲವಾಗಿದೆ. ಇಂಥ ನೆಲದಲ್ಲಿ ಅಸಂಖ್ಯ ಹಿರಿ, ಕಿರಿಯ ದ್ವೀಪಗಳೂ ಇವೆ ; ವಿಶಾಲವಾದ ಭೂಖಂಡಗಳೂ ಇವೆ. ಅವು ಗಳಲ್ಲಿ ಏಷ್ಯಾ ಮತ್ತು ಯೂರೋಪುಗಳು ಕೂಡಿ ಅತ್ಯಂತ ದೊಡ್ಡ ದಾದೊಂದು ಭೂಭಾಗವಾಗುತ್ತದೆ. ಈ ಭೂಖಂಡದ ಸುತ್ತಣ ಅಂಚಿಗೆ ತಾಗಿರುವುದು ಸಾಗರಗಳಷ್ಟೆ. ಹಾಗೆ ಸಾಗರಕ್ಕೆ ತಾಗಿ ರುವ ನೆಲದ ಭಾಗವನ್ನು 'ಕರಾವಳಿ' ಎಂದು ಕರೆಯುತ್ತಾರೆ. ನಮ್ಮ ಭರತಖಂಡ ಏಷ್ಯಾ ಭೂಖಂಡದ ದಕ್ಷಿಣಕ್ಕಿರುವ ಒಂದು ಭೂಭಾಗ. ಅದು ಹೆಚ್ಚು ಕಡಿಮೆ ತ್ರಿಕೋನಾಕಾರದಲ್ಲಿದ್ದು, ಸಮುದ್ರದೊಳಕ್ಕೆ ಚಾಚಿಕೊಂಡಿದೆ. ಹೀಗಾಗಿ ನಮ್ಮ ಭಾರತ ದೇಶಕ್ಕೆ ಸಾವಿರಾರು ಮೈಲು ಉದ್ದದ ಕರಾವಳಿ ಇದೆ. ಅದರಲ್ಲಿ ಸುಮಾರು ೧೮೦ ಮೈಲು ಉದ್ದದ ಕರಾವಳಿಯ ಪ್ರದೇಶ ನಮ್ಮ ಕನ್ನಡ ನಾಡಿಗೆ ಸೇರಿದ್ದು. ಅದರಿಂದ ನಮಗೇನು ಲಾಭ? ಸಮುದ್ರ ದೂರವಿದ್ದರೇನು, ಸಮೀಪವಿದ್ದರೇನು ಎಂಬ ಯೋಚನೆ ನಿಮಗೆ ಬರಬಹುದು.

ಆ ಸಮುದ್ರದಲ್ಲಿರುವ ನೀರೆಲ್ಲವೂ ಉಪ್ಪುನೀರು ; ಬಾಯಾರಿಕೆಯಾದರೆ ಅದನ್ನು ಕುಡಿಯುವಂತೆಯೂ ಇಲ್ಲ. ಆ ಮಾತು ನಿಜವಾದರೂ, ಸಮುದ್ರದಿಂದ ಒಂದು ದೇಶಕ್ಕಿರುವ ಪ್ರಯೋಜನ ಅಷ್ಟಿಷ್ಟಲ್ಲ. ಸಮುದ್ರಗಳು ತಮ್ಮ ಶಾಖೋಷ್ಣ ಗಳಿಂದ ಹವೆಯನ್ನು ನಿಯಂತ್ರಿಸುತ್ತವೆ. ಸಾವಿರಾರು ವರ್ಷಗ ಳಿಂದಲೂ ಜನರು ಸಾಗರ ಮಾರ್ಗವಾಗಿ ಹಡಗುಗಳ ಮೂಲಕ,

ಒಂದು ನಾಡಿಂದ ಇನ್ನೊಂದು ನಾಡಿಗೆ ಪ್ರಯಾಣ ಮಾಡುವುದು ಸಾಧ್ಯವಾಯಿತು. ಭೂಮಿಯ ಮೇಲೆ ಬಲು ದೂರಕ್ಕೆ ನಡೆಯುವುದೋ, ಪ್ರಾಣಿಗಳನ್ನೇರಿ ಸವಾರಿ ಮಾಡುವುದೋ ಕಷ್ಟದ ಕೆಲಸ. ಹಾಗೆ ಹೋಗುವುದಕ್ಕೆ ಸಮನಾದ ದಾರಿ ಬೇಕು ; ಆ ದಾರಿಗೆ ನದಿ, ಗುಡ್ಡ, ಕಾಡುಗಳು ಅಡ್ಡ ಬಂದರೆ ಪಯಣಕ್ಕೆ ತೊಂದರೆ. ಕಡಲಿನ ಮಾರ್ಗ ಹಾಗಲ್ಲ ; ಅಲ್ಲಿ ನೀವು ಹೋದದ್ದೇ ದಾರಿ. ಹಡಗುಗಳು ಹಾಯಿಕಟ್ಟಿಕೊಂಡು ಕಡಲಿಗೆ ಇಳಿದುವೆಂದರೆ ಅನುಕೂಲವಾಗಿ ಗಾಳಿ ಬೀಸಿದಾಗಲೆಲ್ಲ ಶ್ರಮವಿಲ್ಲದೆ ಸಂಚಾರ ಸಾಧ್ಯವಾಗುತ್ತದೆ. ಗಾಳಿ ನಿಂತರೆ, ಅಥವಾ ಇದಿರು ಗಾಳಿ ಬಂದರೆ ಅನುಕೂಲ ಗಾಳಿ ಸಿಗುವ ತನಕವೂ, ಅಲ್ಲೇ ಕಾಯಬೇಕು. ಹಡಗಿನ ಪಯಣದಲ್ಲಿ ದೇಹಕ್ಕೆ ಶ್ರಮವಿಲ್ಲ. ಪ್ರಯಾಣಿಕರು ತಮ್ಮೊಡನೆ ಸಾಕಷ್ಟು ಸಿಹಿನೀರು, ಅನ್ನಾಹಾರ ಒಯ್ದುದ್ದಾದರೆ ಎಷ್ಟೊ ದಿನಗಳ ತನಕ ಸಂಚರಿಸುತ್ತಲೇ ಇರಬಹುದು. ಸಾಹಸಿಗಳಾದ ಕೊಲಂಬಸ್, ಕುಕ್, ಮೆಗ್ಗಲನ್, ವಾಸ್ಕೋಡಿಗಾಮ ಮೊದಲಾದವರು–ಸಾಗರಗಳನ್ನು ನಂಬಿ, ಅಲೆದಾಡಿ, ಎಲ್ಲೆಲ್ಲಿ ಭೂಖಂಡಗಳಿವೆ ಎಂಬುದನ್ನು ಹುಡುಕಿ ಬಂದರು. ಅವರು ಹೋದ ಅನೇಕ ದೇಶಗಳಲ್ಲಿ ಮನುಷ್ಯರೂ ವಾಸವಾಗಿದ್ದರು. ಹಾಗೆ ಅಷ್ಟೊಂದು ಹಿಂದಿನ ಕಾಲದಲ್ಲಿ ಮನುಷ್ಯರು ಭೂಮಿಯುದ್ದಕ್ಕೂ ಹಬ್ಬಿಕೊಂಡದ್ದು ಹೇಗೆ ?

ಇಂದಿಗೆ ಸುಮಾರು ೨೦–೩೦ ಸಾವಿರ ವರ್ಷಗಳ ಹಿಂದೆ, ಸಾಗರಗಳ ನೀರು ಇನ್ನಷ್ಟು ಬತ್ತಿತ್ತು. ಆಗ ಏಷ್ಯಾ, ಅಮೇರಿಕ, ಆಸ್ಟ್ರೇಲಿಯಾ ಮೊದಲಾದ ಭೂಖಂಡಗಳು ಒಂದುಗೂಡಿದ್ದುವು. ಮಧ್ಯ ಏಷ್ಯದಲ್ಲೋ, ಆಫ್ರಿಕದಲ್ಲೋ ಮೊದಲಿಗೆ ಹುಟ್ಟಿಕೊಂಡ ಮನುಷ್ಯಕುಲ ಆಹಾರವನ್ನು ಹುಡುಕುತ್ತ

ಬೇರೆ ಬೇರೆ ಭೂಖಂಡಗಳಿಗೆ ಹೋಗಿ, ಅಲ್ಲಿ ನೆಲೆಸಿತು. ಮುಂದೆ ಭೂಮಿಯ ಮೇಲಣ ಹವೆ ಉಷ್ಣವಾಗುತ್ತಾ ಸರಿದುದರಿಂದ, ಭೂಖಂಡಗಳ ಮೇಲೆ ಹೆಪ್ಪುಗಟ್ಟಿಬಿದ್ದ ಹಿಮಕರಗಿ, ಆ ನೀರಿನಿಂದ ಸಾಗರಗಳು ತುಂಬಿಕೊಂಡವು. ಹಾಗೆ ಕಡಲುಗಳ ನೀರು ಹೆಚ್ಚಿ ಭೂಖಂಡಗಳು ಬೇರೆ ಬೇರೆಯಾದವು. ಅಲ್ಲಲ್ಲಿನ ಜನ ಅಲ್ಲಲ್ಲೇ ಪ್ರತ್ಯೇಕಗೊಂಡರು.

ಮುಂದೆ ಎಷ್ಟೆಷ್ಟೋ ವರ್ಷಗಳ ತರುವಾಯ, ನಾಗರಿಕ ಮನುಷ್ಯರು ದೋಣಿಗಳನ್ನೂ, ಹಡಗುಗಳನ್ನೂ ನಿರ್ಮಿಸಿ ಅವಕ್ಕೆ ಹಾಯಿಕಟ್ಟಿ, ಕಡಲಲ್ಲಿ ಸಂಚರಿಸತೊಡಗಿದ ಮೇಲೆ, ಮರತೇ ಹೋಗಿದ್ದ ಹಲವು ಮನುಷ್ಯಕುಲಗಳು ಎಲ್ಲೆಲ್ಲಿವೆ ಎಂಬುದು ತಿಳಿಯುತ್ತ ಬಂತು. ಅನೇಕ ಸಾಹಸಿಗಳು ಹಡಗುಗಳನ್ನೇರಿ ಸಾಗರಗಳ ಆಚೀಚೆ ಯಾವ ದೇಶ ಕಾಣಸಿಗುತ್ತದೆ, ಅಲ್ಲೇನೇನಿದೆ, ಅಲ್ಲಿನ ಜನರಿಂದ ನಮಗೇನು ಲಾಭ, ನಾವು ಅವರಿಗೆ ಏನನ್ನು ಕೊಟ್ಟು ವ್ಯಾಪಾರ ಮಾಡಬಹುದು–ಎಂಬ ಯೋಚನೆ ಮಾಡಿದರು. ಈ ರೀತಿಯ ಹಡಗಿನ ಯಾನ ನಿನ್ನೆಮೊನ್ನೆ ತೊಡಗಿದ್ದಲ್ಲ. ಯೂರೋಪಿನ ಕುಕ್, ಕೊಲಂಬಸ್, ವಾಸ್ಕೋಡಿಗಾಮ ಮೊದಲಾದವರು ಹುಟ್ಟುವ ಸಾವಿರಾರು ವರ್ಷಗಳ ಹಿಂದೆಯೇ ಕೆಲಕೆಲವು ದೇಶದ ಜನ ಹಡುಗುಗಳಲ್ಲಿ ಸಂಚರಿಸಲು ಕಲಿತುಕೊಂಡಿದ್ದರು.

ಕ್ರಿಸ್ತ ಶಕ ತೊಡಗುವ ಎರಡೂವರೆ ಸಾವಿರ ವರ್ಷಗಳ ಮೊದಲು, ಭಾರತ ದೇಶದ ಸಿಂಧೂ ಕಣಿವೆಯ ಜನರು, ಹಡಗಿನಲ್ಲಿ ಕುಳಿತು ನದಿ ಮಾರ್ಗವಾಗಿ ಕಡಲಿಗೂ, ಅಲ್ಲಿಂದ ಪರ್ಷಿಯನ್ ಕೊಲ್ಲಿಗೂ, ತಿರುಗಿ ನದಿ ಮಾರ್ಗವಾಗಿ ಸುಮೇರಿಯಾ ದೇಶಕ್ಕೂ ಹೋಗಿ ಬರುತ್ತಿದ್ದರು. ಈಗಣ ಲೆಬನಾನ್ ಎಂಬ ದೇಶ ಹಿಂದೆ ಫಿನೀಶಿಯಾ ಎನಿಸಿಕೊಂಡಿತ್ತು. ಅಲ್ಲಿನ ವ್ಯಾಪಾರಿ

ಗಳು ಭೂಮಧ್ಯ ಸಮುದ್ರದಿಂದ ಆಚೆಗಿರುವ ಸಾಗರದ ಮಾರ್ಗ ವಾಗಿ ಯೂರೋಪಿನ ಕರಾವಳಿಯೊಡನೆ ವ್ಯಾಪಾರ ನಡೆಸುತ್ತಿದ್ದರು. ಅವರಲ್ಲಿ ಕೆಲವರು ಕ್ರಿ. ಪೂ. ಸಾವಿರ ವರ್ಷಗಳ ಹಿಂದೆಯೇ ಆಫ್ರಿಕ ಭೂಖಂಡವನ್ನು ಹಡಗಿನಲ್ಲಿ ಕುಳಿತು ಸುತ್ತಿ ಬಂದುದುಂಟು. ಕ್ರಿ.ಶ. ತೊಡಗುವ ಕೆಲವು ಶತಮಾನಗಳ ಮುಂಚೆಯೇ ಈಜಿಪ್ಟ್, ಆಫ್ರಿಕ, ಸುಮೇರಿಯ ಮೊದಲಾದ ದೇಶಗಳು ನಮ್ಮ ಭಾರತ ದೇಶದೊಡನೆ ವ್ಯಾಪಾರ ನಡೆಸುತ್ತಿದ್ದವು. ರೋಮನರು, ಇಟಲಿ ದೇಶದವರು ಭಾರತದ ಪಶ್ಚಿಮ ಮತ್ತು ಪೂರ್ವ ಕರಾವಳಿಗೆ ಬಂದು ಹೋಗುತ್ತಿದ್ದರು. ಅವರು ಇಲ್ಲಿಂದ ಸಂಬಾರ ಜೀನಿಸುಗಳನ್ನು, ನವಿಲು, ರೇಷ್ಮೆ ಮೊದಲಾದುವನ್ನು ತಮ್ಮ ದೇಶಕ್ಕೆ ಒಯ್ಯುತ್ತಿದ್ದರು. ಆ ಕಾಲಕ್ಕೆ ನಮ್ಮ ದೇಶಕ್ಕೂ, ಚೀನಾ ದೇಶಕ್ಕೂ ಸಮುದ್ರಮಾರ್ಗವಾಗಿ ಹಡಗಿನ ಮೂಲಕ ವ್ಯಾಪಾರ ನಡೆಯುತ್ತಿತ್ತು. ಈ ಅವಧಿಯಲ್ಲಿ ಈಜಿಪ್ಟ್ ದೇಶವನ್ನು ಆಳುತ್ತಿದ್ದ ರೋಮನರ ವ್ಯಾಪಾರೀ ಹಡಗುಗಳು ನಮ್ಮ ದೇಶದ ಪೂರ್ವ ಮತ್ತು ಪಶ್ಚಿಮ ಕರಾವಳಿಗಳಿಗೆ ಬಂದು ಹೋಗುತ್ತಿದ್ದವು. ನಮ್ಮ ಕರ್ನಾಟಕದ ಕರಾವಳಿಗೂ ಅವರ ಹಡಗುಗಳು ಬರುತ್ತಿದ್ದುವೆಂದರೆ ಆಶ್ಚರ್ಯ ಪಡಬೇಕಾಗಿಲ್ಲ.

ಈಜಿಪ್ಟ್‌ನಲ್ಲಿ ರೋಮನರು ಆಳುತ್ತಿದ್ದ ಕಾಲದಲ್ಲಿ, ಎರಡನೆಯ ತೊಲೆಮಿ ಎಂಬಾತ ದೊರೆತನ ನಡೆಸುತ್ತಿದ್ದ. ಅದು ಕ್ರಿ. ಶ. ಮೊದಲನೆಯ ಶತಮಾನದ ಸುಮಾರಿಗೆ. ಆ ಕಾಲದ ಒಂದು ಬರವಣಿಗೆಯಲ್ಲಿ–ಭಾರತದೊಡನೆ ಆ ದೇಶಕ್ಕಿದ್ದ ಹಡಗಿನ ಸಂಪರ್ಕದ ವಿವರಗಳು ಸಿಗುತ್ತವೆ. ಕರ್ನಾಟಕದ ಚರಿತ್ರ ಪ್ರಸಿದ್ಧಿಯ ನಗರಗಳಾದ ಬಾದಾಮಿ, ಕಿಸುವೊಳಲು (ಪಟ್ಟದಕಲ್ಲು) ಮತ್ತು ವೈಜಯಂತಿ (ಬನವಾಸಿ) ಗಳ ವಿಚಾರ ಅದರಿಂದ ತಿಳಿಯುತ್ತದೆ. ಅದರಂತೆಯೇ

ಕೇರಳದ ಕೆಲವು ರೇವುಗಳಿಗೂ ಅವರ ಹಡಗುಗಳು ಬಂದು ಹೋಗುತ್ತಿದ್ದುವೆಂದು ತಿಳಿಯುತ್ತದೆ.

ಇಂದಿನ ಹೊನ್ನಾವರಕ್ಕೆ ೨೦ ಮೈಲು ಪಶ್ಚಿಮಕ್ಕಿರುವ ನೇತ್ರಾಣಿ ಎಂಬ ದ್ವೀಪದಲ್ಲಿ ಕಡಲುಗಳ್ಳರಿದ್ದರೆಂದೂ, ಅವರು ವ್ಯಾಪಾರ ವ್ಯವಹಾರಕ್ಕೆ ತೊಂದರೆ ಕೊಡುತ್ತಿದ್ದರೆಂದೂ ಆ ಬರಹದಿಂದ ತಿಳಿಯುತ್ತದೆ. ನಮ್ಮ ನಾಡಿನ ಕಾಳುಮೆಣಸು, ಸಂಬಾರ ಜೀನಸು, ದಂತ ಮೊದಲಾದ ಸಾಮಗ್ರಿಗಳನ್ನು ಅವರು ಒಯ್ಯುತ್ತಿದ್ದರು. ಅದರ ಬದಲಿಗೆ ತಮ್ಮ ನಾಡಿನ ಸರಕುಗಳನ್ನು ಇಲ್ಲಿಗೆ ತಂದು ಮಾರುತ್ತಿದ್ದರು. ನಮ್ಮ ದೇಶದ ಪೂರ್ವ ಕರಾವಳಿಯಲ್ಲಿದ್ದ ಕಾವೇರಿಪಟ್ಟಣ, ಮಚಲೀಪಟ್ಟಣ ಮೊದಲಾದ ರೇವುಗಳು ರೋಮನರೊಡನೆ ವ್ಯಾಪಾರ ನಡೆಯಿಸುತ್ತಿದ್ದವು. ನಮ್ಮ ಪುರಾತನರು ಹೂತಿಟ್ಟ ನಿಧಿಗಳಲ್ಲಿ ಎಷ್ಟೋ ಕಡೆ ಪುರಾತನ ರೋಮನ್ ನಾಣ್ಯಗಳು ಸಿಗುವುದುಂಟು.

ಭಾರತ ದೇಶದ ಚರಿತ್ರೆಯನ್ನು ನೀವು ಸಾಮಾನ್ಯವಾಗಿ ಓದಿಕೊಂಡಿರಬಹುದು. ಈ ದೇಶಕ್ಕೆ ಹೊರಗಿನಿಂದ ಅನೇಕ ಜನರು ಬಂದರು. ಭೂಮಾರ್ಗವಾಗಿ ಆರ್ಯರು, ಪಾರ್ಥಿಯನರು, ಶಕರು, ಹೂಣರು, ತುರ್ಕರು ಮೊದಲಾದ ಜನರು ಆಗಾಗ ವಲಸೆಬಂದು, ಇಲ್ಲೇ ನೆಲೆಸಿದರು. ಹಲವರು ಇಲ್ಲಿಗೆ ಬಂದು, ಲೂಟಿಮಾಡಿ, ಸ್ವದೇಶಗಳಿಗೆ ಮರಳಿದರು. ಅವರೆಲ್ಲರೂ ಬಂದುದು ನಮ್ಮ ದೇಶದ ವಾಯುವ್ಯ ದಿಕ್ಕಿನ ಭೂಮಾರ್ಗಗಳಿಂದ. ಆರ್ಯರು ನಮ್ಮ ದೇಶಕ್ಕೆ ಹೊರಗಿನಿಂದ ಬಂದಂತೆ, ದ್ರಾವಿಡರೂ ಹೊರಗಿನಿಂದಲೇ ಬಂದರು ಎನ್ನುತ್ತಾರೆ. ಅವರು ಹೆಚ್ಚಾಗಿ ಹಡಗಿನ ದಾರಿಯಾಗಿ ಪರ್ಷಿಯನ್ ಕೊಲ್ಲಿಯ ಕಡೆಯಿಂದ ಇಲ್ಲಿಗೆ ಬಂದರು. ಅವರೆಲ್ಲ ಭೂಮಧ್ಯ ಸಮುದ್ರ ತೀರದಲ್ಲಿ ಹಿಂದೆ ವಾಸಿಸುತ್ತಿದ್ದ ಜನಗಳು ಎನ್ನು

ತ್ತಾರೆ. ಪರ್ಷಿಯನ್ ಕೊಲ್ಲಿಯಿಂದ–ಕಡಲ ಕಿನಾರೆಯ ದಾರಿಯಲ್ಲಿ ನಡೆದುಕೊಂಡೇ ಸಿಂಧು, ಗುಜರಾತ್ ದೇಶಗಳಿಗೆ ಬಂದವರೂ ಇದ್ದಾರೆ. ಅದೇ ರೀತಿ ಹಡಗಿನ ದಾರಿಯಾಗಿ ಭಾರತದ ಪಶ್ಚಿಮ ಕರಾವಳಿಗೆ ಬಂದು, ಅಲ್ಲಲ್ಲಿ ಇಳಿದು ಅನಂತರ ಒಳನಾಡುಗಳಿಗೆ ಹೋಗಿ ನೆಲೆಸಿದ ದ್ರಾವಿಡರೂ ಇದ್ದಾರೆ. ಈ ಜನರು ತಮ್ಮ ಮೃತರಿಗಾಗಿ ಚಪ್ಪಡಿ ಕಲ್ಲು ಹಾಸಿದ ಮಂಟಪದಂತಹ ಗೋರಿಗಳನ್ನು ಕಟ್ಟುತ್ತಿದ್ದರು. ಅವರ ಕಲ್ಗೋರಿಗಳು ಕನ್ನಡ ನಾಡಿನ ಕರಾವಳಿಯ ಉದ್ದಕ್ಕೂ ಸಿಗುತ್ತವೆ. ಹಾಗೆಯೇ, ಅದರ ಒಳನಾಡುಗಳಲ್ಲೂ ಸಿಗುತ್ತವೆ. ಈ ಜನರಿಗೆ ಕಬ್ಬಿಣದಂಥ ಲೋಹದ ಉಪಯೋಗ ತಿಳಿದಿತ್ತು.

ಕನ್ನಡ ನಾಡಿನ ನಮಗೆ, ನಮ್ಮ ಸಮುದ್ರ ಕರಾವಳಿಯಿಂದಾಗಿ ಬಲು ಹಿಂದಿನಿಂದಲೇ ಪರದೇಶಿ ಜನರೊಡನೆ ಸಂಪರ್ಕ ಉಂಟಾಗಿತ್ತು. ೨೫ – ೩೦ ಶತಮಾನಗಳಿಂದಲೂ ನಮ್ಮ ವ್ಯಾಪಾರಿಗಳು ಈಜಿಪ್ಟ್, ಆರೇಬಿಯಾ, ಚೀನಾ, ಇಂಡೋಚೀನಾ, ಜಾವಾ ಮೊದಲಾದ ದೇಶಗಳೊಡನೆ ವ್ಯಾಪಾರ ವ್ಯವಹಾರ ನಡೆಸುತ್ತಿದ್ದರು. ವ್ಯಾಪಾರಕ್ಕೆ ಹಡಗಿನಷ್ಟು ಅನುಕೂಲವಾದ ಸಾರಿಗೆ ಪದ್ಧತಿ ಇನ್ನೊಂದಿಲ್ಲ. ನಿನ್ನೆ ಮೊನ್ನೆಯ ತನಕವೂ ಎಂದರೆ ವಿಮಾನಗಳು ಹಾರತೊಡಗಿದ ಈಚಿನ ದಶಕಗಳನ್ನು ಬಿಟ್ಟರೆ, ಯಾವುದೇ ದೂರದೇಶಕ್ಕೆ ಹೋಗಬೇಕಾದರೂ ಜನರ ಪಾಲಿಗೆ ಸಮುದ್ರ ಮಾರ್ಗವೇ ಮುಖ್ಯವಾಗಿತ್ತು. ಆರಂಭದ ಶತಮಾನಗಳಲ್ಲಿ ಜನರು ದೊಡ್ಡ ದೊಡ್ಡ ಹಾಯಿ ಹಡಗುಗಳಲ್ಲಿ ಪಯಣಿಸುತ್ತಿದ್ದರು ; ಅವುಗಳಲ್ಲಿ ಸರಕುಗಳನ್ನೂ ಒಯ್ಯುತ್ತಿದ್ದರು. ಉಗಿ ಎಂಜಿನುಗಳು ನಿರ್ಮಾಣಗೊಳ್ಳತೊಡಗುತ್ತಲೇ ಉಗಿ ಶಕ್ತಿಯಿಂದ ನಡೆಯುವ ಕಬ್ಬಿಣದ ಹಡಗುಗಳು ರೂಢಿಗೆ ಬಂದುವು. ಕಳೆದ ಮತ್ತು ಈ ಶತಮಾನ

ಗಳಲ್ಲಿ, ನಮ್ಮ ದೇಶದಿಂದ ಯೂರೋಪು, ಆಸ್ಟ್ರೇಲಿಯ, ಆಫ್ರಿಕ, ಅಮೇರಿಕ, ಜಪಾನು ಮೊದಲಾದ ದೇಶಗಳಿಗೆ ಪಯ ಣಿಸುವವರು ಇಂಥ ಉಗಿ ಹಡಗುಗಳ ಮೂಲಕ ಪರದೇಶಗಳಿಗೆ ಹೋಗಿ ಬರುತ್ತಿದ್ದರು.

ಹಡಗಿನ ಪ್ರಯಾಣ ಸಾಧ್ಯವಾಗಲು ಕರಾವಳಿಯಲ್ಲಿ ಒಳ್ಳೆಯ ಸೌಕರ್ಯ ಬೇಕು. ಹಡಗನ್ನು ಏರುವುದಕ್ಕೆ, ಅದರ ಮೇಲೆ ಸರಕನ್ನು ತುಂಬಿಸುವುದಕ್ಕೆ ಅದು ನೆಲಕ್ಕೆ ಆದಷ್ಟು ಹತ್ತಿರ ನಿಲ್ಲಬೇಕು. ನೆಲದ ದಂಡೆಗೆ ತಾಗಿ ನಿಂತರೆ ಮತ್ತಷ್ಟು ಅನುಕೂಲ. ಹಾಗೆಯೇ ಸರಕುಗಳನ್ನು ಇಳಿಸುವುದಕ್ಕೂ, ಪ್ರಯಾಣಿಕರು ಇಳಿಯುವುದಕ್ಕೂ ಅಲೆಗಳಿಲ್ಲದ ಕಡಲಿನ ಭಾಗ ಬೇಕು. ಹಡಗು ನಿಂತಲ್ಲಿ ಕಡಲಿನ ಅಲೆಗಳ ಉತ್ಪಾತ ಕಾಣಿಸಿ ದರೆ, ಸರಕನ್ನು ಹೇರುವ, ಇಳಿಸುವ ಕೆಲಸ ಕಷ್ಟ. ಸಮುದ್ರ ಕರಾವಳಿಯ ಹೊರಗಣ ಅಂಚು ಸದಾ ಬೀಸುವ ಗಾಳಿಗೆ ಒಡ್ಡಿದ ಭಾಗವಷ್ಟೆ. ಅಲ್ಲಿ ಕಡಲಿನ ಅಲೆಗಳು ತಪ್ಪಿದ್ದಲ್ಲ. ದೊಡ್ಡ ಉಕ್ಕಿನ ಹಡಗುಗಳಿಗೆ ಅಲೆಗಳಿಂದ ಬಾಧಕವಿಲ್ಲ. ಮರದ ಸಣ್ಣ ಹಡಗುಗಳು, ಅಲೆಗಳ ಬಿರುಸಾದಾಗ ನೀರಲ್ಲಿ ಹೊಂಗಾಡುತ್ತವೆ. ಆಗ ಅವುಗಳ ಮೇಲೆ ಸರಕು ಹೇರಲು ಕಷ್ಟ. ಈ ಕಾರಣಗಳಿಂದ ಹಡಗು ತಂಗುವ ಸ್ಥಳ ಸ್ತಬ್ಧವಾಗಿರಬೇಕು. ಕನ್ನಡ ನಾಡಿನ ಕರಾವಳಿಯಲ್ಲಿ ಕಾಳಿ, ಅಘನಾಶಿನಿ, ಶರಾವತಿ, ಗಂಗೊಳ್ಳಿ, ನೇತ್ರಾವತಿ ಮೊದಲಾದ ನದಿಗಳು ಅಲ್ಲಲ್ಲಿ ಸಮುದ್ರವನ್ನು ಕೂಡುತ್ತವಷ್ಟೆ ! ಅಂಥ ನದಿಗಳು ಕಡಲಿಗೆ ಕೂಡುವ ಅಳಿವೆ ಗಳ ಮೂಲಕವಾಗಿ ಹಡಗುಗಳು ಒಳಕ್ಕೆ ಬಂದು ಅಲೆಗಳ ಅವಾಂತರಗಳನ್ನು ತಪ್ಪಿಸಿಕೊಳ್ಳಬಹುದು. 'ರೇವು' ಅಥವಾ 'ಬಂದರು' ಎಂದು ಕರೆಯುವುದು ಇಂಥ ಸ್ಥಳಗಳನ್ನು. ಕಡಲ ಕರೆಗೆ ತೀರ ಸಮೀಪದಲ್ಲಿ ದೊಡ್ಡ ಒಂದು ದ್ವೀಪವಿದ್ದರೆ,

ಆ ದ್ವೀಪದ ಮರೆಯಲ್ಲಿ ಕಡಲು ಶಾಂತವಾಗಿರುತ್ತದೆ. ಅಲ್ಲಿ ಹಡಗುಗಳು ಸುಖವಾಗಿ ತಂಗಬಹುದು. ನಮ್ಮ ಕಾರವಾರದಲ್ಲಿ ಕಿನಾರೆಗೆ ಸಮೀಪವಾಗಿ ಒಂದು ಗುಡ್ಡದ ಸೆರಗು ಕಡಲಿನೊಳಕ್ಕೆ ಚಾಚಿಕೊಂಡಿದೆ. ಸಮೀಪದಲ್ಲಿ ಒಂದು ದ್ವೀಪವೂ ಇದೆ. ಈ ಕಡಲಿನ ಭಾಗ ಆಳವಾಗಿದ್ದು, ಶಾಂತವಾಗಿರುವುದರಿಂದ ಸಾಮಾನ್ಯ ಹಡಗುಗಳಿಗೆ ತನ್ನಂತೆ ರಕ್ಷಣೆ ದೊರೆಯುತ್ತದೆ. ಉಡುಪಿಗೆ ಪಡುವಣದ ಮಲ್ಪೆ ಎಂಬಲ್ಲಿ ಕಿನಾರೆಗೆ ಸಮೀಪವಾಗಿ 'ಬಹದ್ದೂರ್ ಗಡ' ಎಂಬೊಂದು ದ್ವೀಪವಿದೆ. ಅದರ ಮರೆಯಲ್ಲಿ ಹಡಗುಗಳು ತಂಗಲು ಅನುಕೂಲವಾಗಿದೆ. ಅದೂ ಒಳ್ಳೆಯ ರೇವು. ಇದಲ್ಲದೆ ಅಳಿವೆಗಳ ಮೂಲಕ ಸಾಮಾನ್ಯ ಹಡಗುಗಳು ನದಿಯೊಳಗೆ ಬಂದು ರಕ್ಷಣೆ ಪಡೆಯಬಹುದು. ಅವುಗಳ ಮೇಲೆ ಸರಕನ್ನು ಹೇರಲು, ಇಳಿಸಲು, ಅಲ್ಲಿನ ನದಿ ದಂಡೆಗಳಿಗೆ ಕಟ್ಟೆ ಕಟ್ಟಿ ಅನುಕೂಲತೆ ಒದಗಿಸಬಹುದು.

ನಮ್ಮ ಕರಾವಳಿಯ ಕುಮಟೆ, ಕಾರವಾರ, ತದಡಿ, ಭಟ್ಕಳ, ಹೊನ್ನಾವರ, ಬಸರೂರು, ಬಾರಕೂರು, ಮಲ್ಪೆ, ಮಂಗಳೂರು ಮೊದಲಾದುವು ಬಹಳ ಹಿಂದಿನಿಂದ ಅರೇಬಿಯ, ಸಿಂಹಳ, ಲಕ್ಷದ್ವೀಪಗಳೊಡನೆಯೂ, ಕರಾವಳಿಯ ಇತರ ರೇವುಗಳೊಡನೆಯೂ ಹಡಗಿನ ವ್ಯಾಪಾರ ನಡೆಸುತ್ತಿದ್ದುವು. ಕನ್ನಡ ಜಿಲ್ಲೆಯ ಒಂದು ಜಾತಿ ಅಕ್ಕಿಗೆ 'ಮಸ್ಕತಿ ಅಕ್ಕಿ' ಎಂಬ ಹೆಸರಿದೆ. ಹಿಂದೆ ಅದನ್ನು ಅರಬ್ಬರು ಪರ್ಷಿಯನ್ ಕೊಲ್ಲಿಯ 'ಮಸ್ಕತ್' ಎಂಬ ಊರಿಗೆ ಸಾಗಿಸುತ್ತಿದ್ದುದರಿಂದ ಅದಕ್ಕೆ ಆ ಹೆಸರು ಬಂದಿತು. ಯುರೋಪಿನೊಡನೆ ನಮ್ಮ ದೇಶದ ವ್ಯಾಪಾರ ಬೆಳೆದ ಮೇಲೆ–ಅಲ್ಲಿನ ಸರಕುಗಳಿಗೆ 'ವಿಲಾಯಿತಿ ಮಾಲು' ಎಂಬ ಹೆಸರು ಬಂತು.

ನಿಜಕ್ಕೂ 'ವಿಲಾಯತ್' ಎಂಬ ಊರಿರುವುದು ಪರ್ಷಿಯನ್ ಕೊಲ್ಲಿಯ ದಂಡೆಯಲ್ಲಿ. ನಮ್ಮಲ್ಲಿಗೆ ಬರುವ ಹೆಚ್ಚಿನ ಹಾಯಿ ಹಡಗುಗಳು ಅರೇಬಿಯದವು. ದೊಡ್ಡ ಹಡಗುಗಳು ಯೂರೋಪಿನವು. ಹಿಂದೆ ದಕ್ಷಿಣದಲ್ಲಿ ಬೆಳೆದ ಹತ್ತಿ ಮತ್ತು ಮೆಣಸುಗಳನ್ನು ಕುಮಟೆ ಬಂದರಿನ ಮೂಲಕ ವಿದೇಶಕ್ಕೆ ಸಾಗಿಸುತ್ತಿದ್ದರು. ಹಾಗಾಗಿ ಅವಕ್ಕೆ 'ಕುಮಟೆ ಹತ್ತಿ' 'ಕುಮಟೆ ಮೆಣಸು' ಎಂಬ ಹೆಸರು ಬಂತು.

ಹಿಂದಿನ ಕಾಲದ ವಿಜಯನಗರದ ದೊರೆಗಳೂ, ಬಿಜಾಪುರದ ಸುಲ್ತಾನರೂ ಕನ್ನಡ ರಾಜ್ಯವನ್ನು ಆಳುತ್ತಿದ್ದಾಗ, ಅವರ ಸೈನ್ಯಕ್ಕೆ ಬೇಕಾಗುತ್ತಿದ್ದ ಕುದುರೆಗಳನ್ನು ಅರೇಬಿಯದಿಂದ ತರಿಸಿಕೊಳ್ಳುತ್ತಿದ್ದರು. ಅವೇ ಕುದುರೆಗಳು ತದಡಿ ರೇವಿನ ಮೂಲಕ ಬಿಜಾಪುರಕ್ಕೂ, ಭಟ್ಕಳ ರೇವಿನ ಮೂಲಕ ವಿಜಯನಗರಕ್ಕೂ ಆಮದುಗೊಳ್ಳುತ್ತಿದ್ದುವು. ನಮ್ಮ ಜಿಲ್ಲೆಗಳ ಅರಿವೆ, ಕಾಳು ಮೆಣಸು, ಬೆಲ್ಲ, ಗಂಧ, ಹುರಿಹಗ್ಗ ಮೊದಲಾದ ಅನೇಕ ವಸ್ತುಗಳು ಕನ್ನಡನಾಡಿನ ಬೇರೆ ಬೇರೆ ರೇವುಗಳಿಂದ ಪರದೇಶಗಳಿಗೆ ಹೋಗುತ್ತಿದ್ದವು.

ರೇವುಗಳಿಂದ ಉಪಕಾರವಾದಂತೆ ಉಪದ್ರವವೂ ನಮ್ಮ ದೇಶಕ್ಕಾದುದುಂಟು. ಹೊರಗಣ ದ್ರಾವಿಡರು ಹಡಗಿನ ದಾರಿಯಾಗಿ ಇಲ್ಲಿಗೆ ಬಂದರು ; ಹಾಗೆ ಬಂದವರು ದೇಶದೊಳಗೆಲ್ಲಾ ಹಬ್ಬಿ, ಅಲ್ಲಲ್ಲಿ ನೆಲೆಸಿದರು. ಹತ್ತನೆಯ ಶತಮಾನದ ಸುಮಾರಿಗೆ ಅರಬ್ಬರು ಗುಜರಾತ್ ಮತ್ತು ಸಿಂಧ್ ದೇಶಗಳ ಮೇಲೆ ಹಡಗಿನ ಮಾರ್ಗವಾಗಿಯೇ ಬಂದು ದಾಳಿ ನಡೆಸಿದರು ; ಸೂರೆ ಸುಲಿಗೆ ಮಾಡಿದರು. ೧೫–೧೬ನೆಯ ಶತಮಾನದ ಬಳಿಕ ಹಡಗಿನ ಮಾರ್ಗವಾಗಿ ಭಾರತಕ್ಕೆ ಬಂದ ಡಚ್ಚರು, ಬ್ರಿಟಿಷರು, ಫ್ರೆಂಚರು ಹೊನ್ನಾವರ, ಕಾರವಾರ, ಮಂಗಳೂರು ಮೊದಲಾದ ರೇವುಗಳಲ್ಲಿ ನೆಲೆಸಿದರು. ಅಲ್ಲಿ

ಮಳಿಗೆಗಳನ್ನು ತೆರೆದರು ; ವ್ಯಾಪಾರ ನಡೆಯಿಸಿದರು. ಆ ಬಳಿಕ ನಮ್ಮ ನಮ್ಮ ದೇಶದ ದೊರೆಗಳ ಜಗಳಗಳಲ್ಲಿ ಪಾಲುವಹಿಸಿ, ಕೊನೆಗೆ ತಾವೇ ಈ ನಾಡಿನ ದೊರೆಗಳಾದರು ಎಂಬುದನ್ನು ಕೇಳಿದ್ದೀರಿ. ಇದರಲ್ಲಿ ಕಡಲಿನ ತಪ್ಪಿಲ್ಲ ; ತಪ್ಪು ಜನಗಳದ್ದು.

ಈ ಹೊತ್ತು ನಾವು ಹಲವಾರು ದೇಶಗಳೊಡನೆ ಸಂಪರ್ಕ ಇರಿಸಿಕೊಂಡಿದ್ದೇವೆ. ಕಡಲಿನ ದಾರಿ ಆ ಸಂಪರ್ಕವನ್ನು ಸುಲಭವಾಗಿ ಮಾಡಿಕೊಟ್ಟಿದೆ. ನೆಲದ ಮೇಲೆ ಬಂಡಿ ಅಥವಾ ರೈಲಿನ ಮೂಲಕ ನೂರು ಮೈಲು ದೂರ ಒಯ್ಯಲು ತಗಲುವ ವೆಚ್ಚದಲ್ಲಿ, ಎರಡು ಸಾವಿರ ಮೈಲು ದೂರ ಹಡಗಿನಲ್ಲಿ ಸರಕುಗಳನ್ನು ಸಾಗಿಸಬಹುದು. ಕಬ್ಬಿಣದ ಅದುರು, ಮ್ಯಾಂಗನೀಸ್ ಮೊದಲಾದಂತಹ ಕಚ್ಚಾ ಸಾಮಗ್ರಿಗಳನ್ನು ಸಾಗಿಸಲು ಜಲಮಾರ್ಗದಷ್ಟು ಸೌಕರ್ಯ ಇನ್ನಾವುದಕ್ಕಿಲ್ಲ.

ನಮ್ಮ ಕರಾವಳಿಯೆಂಬುದು ಉತ್ತರದಲ್ಲಿರುವ ಕೆಂಬೇ ಕೊಲ್ಲಿಯಿಂದ ದಕ್ಷಿಣ ಕನ್ಯಾಕುಮಾರಿಯ ತನಕವೂ ಚಾಚಿಕೊಂಡ ನೀಳವಾದೊಂದು ಭೂಮಿಯ ಸೆರಗು. ಈ ಸೆರಗಿನ ಉದ್ದಕ್ಕೂ-ಸಮುದ್ರದಂಡೆಯಿಂದ ೧೦ ರಿಂದ ೪೦ ಮೈಲು ಅಂತರದಲ್ಲಿ-ಅಷ್ಟೇ ಉದ್ದದ ಸಹ್ಯಾದ್ರಿ ಪರ್ವತಾವಳಿ ಚಾಚಿಕೊಂಡಿದೆ. ಅವೇ ಪಶ್ಚಿಮ ಘಟ್ಟಗಳೆಂಬವು. ಅದರ ಮೂಡಣದ ಭೂಭಾಗ ಎತ್ತರ ; ಪಡುವಣದ ಭೂಭಾಗ ತಗ್ಗಾಗಿದೆ. ಈ ತಗ್ಗಿನ ಪ್ರದೇಶವನ್ನು ಪುರಾಣಗಳಲ್ಲಿ 'ಪರಶುರಾಮ ಸೃಷ್ಟಿ' ಎಂದು ಕರೆದಿದ್ದಾರೆ. ಅನಂತರದ ಚರಿತ್ರೆಯಲ್ಲಿ ಅದನ್ನು ಕೊಂಕಣ ದೇಶವೆಂದು ಕರೆಯುತ್ತಾ ಬಂದಿದ್ದಾರೆ. ಇಂದು ಈ ಕೊಂಕಣ ಪಟ್ಟಿಯ ದಕ್ಷಿಣ ಭಾಗ 'ಕೇರಳ ಪ್ರಾಂತ' ಎನಿಸಿದೆ. ಅದರ ಉತ್ತರ ಭಾಗ ಮಹಾರಾಷ್ಟ್ರಕ್ಕೆ ಸೇರುತ್ತದೆ. ಇವೆರಡರ ನಡುವಣ ಭಾಗ, ಸುಮಾರು ೧೮೦

ಮೈಲು ಉದ್ದದ್ದು, ನಮ್ಮ ಕರ್ನಾಟಕ ರಾಜ್ಯಕ್ಕೆ ಸೇರಿದೆ. ಪ್ರಾಕೃತಿಕ ದೃಷ್ಟಿಯಿಂದ ಈ ಪ್ರದೇಶ ಒಂದೇ ರೀತಿ ಕಾಣಿಸುವ ಭೂಮಿ. ಇಲ್ಲಿನ ಪಶ್ಚಿಮ ಘಟ್ಟಗಳ ಸೆರಗು ಪರ್ವತಗಳ ರಾಜ್ಯ. ಅಲ್ಲಿಂದ ಹಲವಾರು ಬೆಟ್ಟದ ಸೆರಗುಗಳು ಇಳಿಯುತ್ತ ಪಡುವಣದ ಕಡಲಿನ ತನಕವೂ ಬರುತ್ತವೆ. ಹೆಚ್ಚು ಕಡಿಮೆ ಈ ಪ್ರದೇಶವೆಲ್ಲವೂ ಗುಡ್ಡಗಾಡಿನ ಸೀಮೆ. ಇಲ್ಲಿ ಧಾರಾಳವಾಗಿ ಮಳೆ ಬೀಳುವುದರಿಂದ, ಇಲ್ಲಿನ ಬೆಟ್ಟಗಳ ತಪ್ಪಲುಗಳಲ್ಲಿ ಕಾಡು ಸಮೃದ್ಧವಾಗಿ ಬೆಳೆಯುತ್ತದೆ. ಕರಾವಳಿಯ ಅಂಚಿನಲ್ಲಷ್ಟೆ ಒಂದಿಷ್ಟು ಸಮತಟ್ಟಾದ ನೆಲ ಕಾಣಿಸುತ್ತದೆ. ಇನ್ನು, ಇಲ್ಲಿನ ಅನೇಕ ನದಿ ಕಣಿವೆಗಳ ಮಗ್ಗುಲನ್ನು ಸಾವಿರಾರು ವರ್ಷಗಳಿಂದ ಜನರು ಸಮತಟ್ಟಾಗಿ ಮಾಡಿ, ಹೊಲ ಗದ್ದೆಗಳನ್ನಾಗಿ ರೂಪಿಸಿದ್ದಾರೆ. ಈ ಪ್ರದೇಶ ಬೆಳೆಗಳ ಹಸುರು, ತೆಂಗು ಕಂಗಿನ ತೋಟಗಳ ಹಸುರು, ಕಾಡುಗಳ ದಟ್ಟ ಹಸುರು ತುಂಬಿಕೊಂಡ ಒಂದು ಸುಂದರ ಪ್ರದೇಶ. ಈ ಪ್ರದೇಶದಲ್ಲಿ ವರ್ಷಂಪ್ರತಿ ನಾಲ್ಕು ತಿಂಗಳ ಮಳೆಗಾಲದಲ್ಲಿ ೧೩೦ ಇಂಚಿಗಿಂತ ಹೆಚ್ಚಿಗೆ ಮಳೆ ಬೀಳುವುದರಿಂದ, ಅನೇಕ ನದಿಗಳು ಪರ್ವತಗಳಲ್ಲಿ ಹುಟ್ಟಿ, ಹರಿದು ಪಶ್ಚಿಮ ಸಮುದ್ರವನ್ನು ಸೇರುತ್ತವೆ ಮತ್ತು ಅಂಕುಡೊಂಕಾದ ಆ ನದಿಗಳು ನಾಡಿನ ಸೊಬಗನ್ನೂ ಸಂಪತ್ತನ್ನೂ ಹೆಚ್ಚಿಸುತ್ತವೆ.

೨

ಇಂಥ ಒಂದು ಸೀಮೆಯಲ್ಲಿ ಮನುಷ್ಯರು ಎಂದು ಬಂದು ನೆಲೆಸಿದರೆಂದು ಹೇಳುವುದಕ್ಕಾಗುವುದಿಲ್ಲ. ತೀರ ಮೊದಲಿಗೆ ಇದು ದಟ್ಟವಾದ ಕಾಡುಗಳಿಂದ ತುಂಬಿಕೊಂಡಿತ್ತಾದುದರಿಂದ, ಇಲ್ಲಿ ಒಂದು ನೆಲೆಸಿದವರಿಗೆ ಜೀವನ ನಡೆಸುವುದು ತೀರ ಕಷ್ಟದ ಕೆಲಸವಾಗಿತ್ತು. ಆದಿಕಾಲದ ಆ ಜನರು ಕಾಡು

ಗಳನ್ನು ಸವರಿ, ನೆಲವನ್ನು ಸಮತಟ್ಟನ್ನಾಗಿ ಮಾಡಿ, ಹೊಲ ಗದ್ದೆಗಳನ್ನು ನಿರ್ಮಿಸಲು ಎಷ್ಟೆಲ್ಲ ಶ್ರಮಪಟ್ಟರೆಂದು ತಿಳಿಯದು. ಸಾಮಾನ್ಯವಾಗಿ ಕ್ರಿ. ಪೂ. ಒಂದು ಸಾವಿರ ವರ್ಷಗಳ ಹಿಂದಿನಿಂದಲೂ ಮನುಷ್ಯಕುಲ ಇಲ್ಲಿ ವಾಸಿಸುತ್ತ ಬಂದಿರಬೇಕು. ತೀರ ಹಿಂದಿನವರು ಕಟ್ಟಿದ ಪೇಟೆ, ಪಟ್ಟಣಗಳಾವುವೂ ಇಂದು ಉಳಿದಿಲ್ಲ. ತೀರ ಆರಂಭದ ದಿನಗಳಲ್ಲಿ ಜನರು ಇಲ್ಲಿ ನೆಲೆಸಿ ಬೇಸಾಯ ಮಾಡಿಕೊಂಡು ಬದುಕುವುದು ಸುಲಭವಾಗಿರಲಿಲ್ಲ. ಅವರ ಬೆಳೆಗಳಿಗೆ ಕಾಡುಮೃಗಗಳ ಹಾವಳಿ ತಪ್ಪಿದ್ದಲ್ಲ. ಮೊದಲು ರೈತರು ತಮ್ಮ ಹೊಲಗದ್ದೆಗಳನ್ನು ಈ ವನ್ಯಮೃಗಗಳ ಹಾವಳಿಯಿಂದ ರಕ್ಷಿಸಲು ಪಟ್ಟಪಾಡು ವಿಪರೀತ. ಬೆಳೆದ ಬೆಳೆಯನ್ನು ಮುಕ್ಕಿ, ತುಳಿದು, ತಲೆಕೆಳಗೆ ಮಾಡುವ ಕಾಡುಹಂದಿಗಳಿದ್ದವು, ಬೆಳೆಗಳಿಗೆ ಬಂದು ಬಾಯಿ ಹಾಕುವ ಕಾಟಿ, ಕಡವೆ, ಜಿಂಕೆಗಳಿದ್ದುವು. ಬಲಿತ ಪೈರನ್ನು ದೋಚುವ ಮಂಗ, ಮುಸುವಗಳಿದ್ದುವು. ಇಂದು ಅವುಗಳ ಬಾಧೆ ಅಷ್ಟೊಂದು ಹೆಚ್ಚಾಗಿಲ್ಲ. ಜನವಸತಿ ಹೆಚ್ಚಿ, ಕಾಡುಗಳು ಕಡಿಮೆಯಾಗಿವೆ. ಹಿಂದೆ ಹಾಗಿರಲಿಲ್ಲ. ಈ ಕಾರಣದಿಂದಲೇ ಹಿಂದಿನ ರೈತರು ಕಾಡುಹಂದಿಗೆ ಹೆದರಿ ಕಂಗಾಲಾದುದುಂಟು. ಹಂದಿಗೆ ಹೆದರಿಕೊಂಡು ಅವರು 'ಹಂದಿದೇವತೆ'ಯನ್ನು ಪ್ರಾರ್ಥಿಸಿ ಮೊರೆಯಿಟ್ಟದ್ದುಂಟು. 'ಪಂಜುರ್ಲಿ' ಎಂಬುದು ಅಂಥ ಒಂದು ದೇವತೆ. ತುಳು ಭಾಷೆಯಲ್ಲಿ 'ಪಂಜಿ' ಎಂದರೆ ಹಂದಿ. ಕನ್ನಡನಾಡಿನ ಅಂಗವಾದ ತುಳುನಾಡಿನಲ್ಲಿ ಜನ ಇಂದಿಗೂ ಈ ದೇವತೆಗೆ ಹರಕೆ ಸಲ್ಲಿಸುತ್ತಾರೆ. ಅಲ್ಲಿನ ಕೃಷಿಕರು ಬೇಸಾಯಕ್ಕೂ, ಹಾಲಿಗೂ ಸಾಕುತ್ತಿದ್ದ ದನಕರುಗಳ ಬಗೆಗೂ ಚಿಂತೆ ತಾಳಬೇಕಾಗಿತ್ತು. ಅವನ್ನು ಪಶ್ಚಿಮ ಘಟ್ಟದ ಆಚೆಗಿರುವ ಬಯಲುಸೀಮೆಯಿಂದ ಕೊಂಡು ಬರುತ್ತಿದ್ದರು. ಹಾಗೆ ಬೆಲೆ ಕೊಟ್ಟು

ತಂದ ಕೋಣಗಳು, ಎತ್ತುಗಳು ರೋಗರುಜಿನಗಳಿಗೆ ಗುರಿಯಾಗಿ ಆಗಾಗ ಸಾವಿಗೆ ತುತ್ತಾಗುತ್ತಿದ್ದುವು. ಇಂಥ ರೋಗರುಜಿನಗಳನ್ನು ಕೆಲವು ಭೂತಗಳು ತರುತ್ತವೆ–ಎಂಬ ನಂಬಿಕೆ ಜನರಲ್ಲಿತ್ತು. ಅದಕ್ಕಾಗಿ ಜನರು ಹದಿನೆಂಟು ಹೆಸರುಗಳಲ್ಲಿ ಭೂತಗಳನ್ನು ಪೂಜಿಸುತ್ತಿದ್ದರು. ಇಂದಿಗೂ ಆ ಕ್ರಮ ಉಳಿದಿದೆ. ದನಕರುಗಳನ್ನು ಕೊಂದು ತಿನ್ನುವ ಹುಲಿಯೂ ಒಂದು ಭೂತವೆ ! ಹೀಗಾಗಿ 'ಹುಲಿ ಭೂತ' ಎಂಬೊಂದು ಭೂತವನ್ನೂ ನಂಬಿ ಪೂಜಿಸುತ್ತಿದ್ದರು.

ಇಲ್ಲಿನ ಕಾಡುಗಳಲ್ಲಿ ಹಾವುಗಳಂತು ಧಾರಾಳವಾಗಿವೆ. ಅವುಗಳಲ್ಲಿ ಸರ್ಪದ ಭಯ ಎಲ್ಲಕ್ಕಿಂತ ಹೆಚ್ಚು. ಈ ಕಾರಣದಿಂದಾಗಿ ನಮ್ಮ ಜನರಲ್ಲಿ ಸರ್ಪಾರಾಧನೆ ಮೊದಲಿನಿಂದ ರೂಢಿಯಲ್ಲಿತ್ತು. ಸರ್ಪ, ನಾಗ, ಸುಬ್ರಹ್ಮಣ್ಯ ಎಂಬ ಹೆಸರುಗಳು ಒಂದೇ ದೇವತೆಗೆ ಸಲ್ಲುತ್ತವೆ. ಸರ್ಪ ವಾಸಿಸುವ ಹುತ್ತವನ್ನು ಪೂಜಿಸುವ ವಾಡಿಕೆ ಈ ಕರಾವಳಿಯ ಕಾಳಾವರ, ಸುಬ್ರಹ್ಮಣ್ಯ ಮೊದಲಾದ ತಾವುಗಳಲ್ಲಿ ದೀರ್ಘಕಾಲದಿಂದ ರೂಢಿಯಲ್ಲಿದೆ. ಇಲ್ಲಿನ ಪುರಾತನ ಕ್ಷೇತ್ರಗಳಲ್ಲಿ ಒಂದಾದ 'ಗೋಕರ್ಣ'ಕ್ಕೆ 'ಅಹಿಕ್ಷೇತ್ರ' ಎಂಬ ಇನ್ನೊಂದು ಹೆಸರಿದೆ. 'ಅಹಿ' ಎಂದರೆ ಸರ್ಪ. ಇಂಥ ದೈವ, ಭೂತಗಳಲ್ಲದೆ ಸಾಂಕ್ರಾಮಿಕ ರೋಗಗಳಾದ ಮೈಲಿಗೆ ಸೀತಾಳಿಯಂತಹ ಪಿಡುಗುಗಳಿಗೂ ಹೆದರುತ್ತಿದ್ದ ಜನರು, ಅವಕ್ಕೆ ಸಂಬಂಧಿಸಿದ ಬೇರೆ ಬೇರೆ ದೇವತೆಗಳನ್ನು ಕಲ್ಪಿಸಿಕೊಂಡು ಪೂಜಿಸುತ್ತಿದ್ದರು. 'ಮಾರಿಯಮ್ಮ' ಅಂಥ ಒಂದು ಪುರಾತನ ದೇವತೆ. ಶಿರ್ಸಿಯ ಮಾರಿಯಮ್ಮ ಈ ಪ್ರಾಂತಕ್ಕೆ ಪ್ರಸಿದ್ಧಳು. ಈ ನಾಡಿನಲ್ಲಿ ಅಲ್ಲಲ್ಲಿ, ಹಲವಾರು ಮಾರಿ ಗುಡಿಗಳನ್ನು ನೀವು ಕಾಣಬಹುದು.

ತೀರ ಮೊದಲಿಗೆ ಇಲ್ಲಿಗೆ ಬಂದು ಎಂಥ ಜನ ವಾಸಿಸಿಕೊಂಡಿದ್ದರು ಎಂಬ ಬಗೆಗೆ ನಮಗೆ ಸಾಕಷ್ಟು ಸಾಕ್ಷಿ ದೊರೆ

ಯುತ್ತಿಲ್ಲ. ಇಲ್ಲಿ ಎರಡು ಎರಡೂವರೆ ಸಾವಿರ ವರ್ಷಗಳಷ್ಟು ಹಿಂದಿನ ಕಲ್ಗೋರಿಗಳು ಕಾಣಸಿಗುತ್ತವೆ. ಅವು ಇಲ್ಲಿಗೆ ವಲಸೆ ಬಂದ ದ್ರಾವಿಡ ಜನರದ್ದು.

ಇಲ್ಲಿನ ಪುರಾತನ ನಿವಾಸಿಗಳು ಹೇಗೆ ಬದುಕು ಮಾಡಿಕೊಂಡಿದ್ದರು ಎಂಬುದನ್ನು ನಾವು ಊಹಿಸಿಯೇ ಹೇಳಬೇಕು. ಇಲ್ಲಿನ ಗುಡ್ಡಗಳಲ್ಲಿ ಬೇಟೆಯಿಂದ ಜೀವನ ನಡೆಯಿಸುತ್ತಿದ್ದ ಕುಡಿಯರು ವಾಸಿಸುತ್ತಿದ್ದಿರಬೇಕು. ಸಮಾಜದ ಹೊರಗೆ ಉಳಿದು, ಕೀಳಾಗಿ ಎಣಿಸಲ್ಪಟ್ಟ ಹೊಲೆಯರೆಂಬುವರೂ ಇಲ್ಲಿನ ಮೂಲ ನಿವಾಸಿಗಳಾಗಿದ್ದಿರಬೇಕು. ಅವರಲ್ಲಿ ಕೆಲವರನ್ನು ಹಿಂದಿನವರು ಅಂಡೆ ಕೊರಗರು, ಸೊಪ್ಪು ಕೊರಗರು ಎಂದು ಕರೆದದ್ದುಂಟು. ಅಂಥವರು ಅರಿವೆಯ ಬದಲು ಸೊಪ್ಪನ್ನು ಕಿರಗಿನಯಂತೆ ತೊಡುತ್ತಿದ್ದರು. ಈ ಜನರು ಬೇಟೆಯಿಂದ ಬದುಕಿದರು ; ಗಡ್ಡೆ ಗೆಣಸುಗಳನ್ನು ತಿಂದು ಬದುಕಿದರು. ಇನ್ನುಳಿದ ಹೆಚ್ಚಿನ ಜನರು ಇಲ್ಲಿನ ಕಣಿವೆಗಳಲ್ಲಿ ನೆಲಸಿ,ಕೃಷಿಯಿಂದ ಜೀವನ ನಡೆಯಿಸಿದರು. ಜೀವನಕ್ಕೆ ಇನ್ನೊಂದು ದೊಡ್ಡ ಅನುಕೂಲತೆ ಸಮುದ್ರಗಳಿರುವಲ್ಲೆಲ್ಲ ಇದ್ದೇ ಇದೆ. ಅದೆಂದರೆ ಕಡಲಲ್ಲಿ ಧಾರಾಳವಾಗಿರುವ ಮೀನುಗಳು. ಅವುಗಳನ್ನು ಹಿಡಿದು ತಿನ್ನುವ ಉದ್ಯೋಗ ಸಾವಿರಾರು ವರ್ಷಗಳಿಂದಲೂ ಕರಾವಳಿಯಲ್ಲಿ ರೂಢಿಯಲ್ಲಿತ್ತು. ಈ ಮೀನುಗಾರರು ಮಳೆಗಾಲವೊಂದು ಬಿಟ್ಟರೆ ಉಳಿದ ವೇಳೆ ಕಡಲಿಗೆ ಹೋಗಿ ಮೀನು ಹಿಡಿಯುತ್ತಿದ್ದರು. ಮಳೆಗಾಲದಲ್ಲಿ ನದಿ, ಹಾರಿಗಳಲ್ಲಿ ಮೀನು, ಸಿಗಡಿ, ಏಡಿ, ಮೊದಲಾದುವನ್ನು ಹಿಡಿದು ಜೀವನ ಸಾಗಿಸುತ್ತಿದ್ದರು.

ಶತಮಾನಗಳು ಸರಿದಂತೆ, ಇನ್ನೂ ಇನ್ನೂ ಹೊರಗಿನ ಜನ ಈ ಪ್ರದೇಶಕ್ಕೆ ಬಂದು ನೆಲೆಸತೊಡಗಿದರು. ಹಾಗೆ ಬಂದವರು ತಂತಮ್ಮ ನಂಬಿಕೆಗಳನ್ನು, ದೇವರುಗಳನ್ನು ತಮ್ಮ

ಜತೆಗೆ ತಂದರು. ಅವರ ಮತಧರ್ಮಗಳೂ ಕರ್ನಾಟಕದ ಕರಾವಳಿಯಲ್ಲಿ ಪ್ರಸಾರಗೊಂಡವು. ಮೊದಲು ಈ ಪ್ರದೇಶಕ್ಕೆ ಬಂದ ಧರ್ಮವೆಂದರೆ ಆರ್ಯರು ಭಾರತಕ್ಕೆ ತಂದ ವೈದಿಕ ಧರ್ಮ. ಅದೇ ಕಾಲಕ್ರಮದಲ್ಲಿ 'ಬ್ರಾಹ್ಮಣ ಧರ್ಮ' ಅಥವಾ 'ಹಿಂದೂ ಧರ್ಮ' ಅನಿಸಿತು. ಬ್ರಾಹ್ಮಣರು ಈ ಪ್ರದೇಶಕ್ಕೆ ಕ್ರಿ.ಶ. ತೊಡಗಿದ ಮೇಲೆಯೇ ಬಂದವರಿರಬೇಕು. ಕದಂಬ ದೊರೆ ಮಯೂರಶರ್ಮ ಮೊಟ್ಟ ಮೊದಲಿಗೆ ಬ್ರಾಹ್ಮಣರನ್ನು ಇಲ್ಲಿಗೆ ತಂದು ಸ್ಥಾಪಿಸಿದ ಎಂಬ ಕತೆ ಇದೆ. ಇಲ್ಲಿಗೆ ಬಂದ ಬ್ರಾಹ್ಮಣರ ಸಲುವಾಗಿ 'ಪರಶುರಾಮ' ಕಡಲನ್ನು ಗೆದ್ದು ನೆಲವನ್ನು ಒದಗಿಸಿದ ಎಂಬ ಕತೆಯೂ ಇದೆ. ಇಲ್ಲಿನ ಕಡಲು ತೀರದ ನೆಲ ಸುಮಾರು ೪೦ ಸಾವಿರ ವರ್ಷಗಳ ಹಿಂದೆ ಉಂಟಾದ ಭೂಮಿಯ ಚಪ್ಪಟೆ ಸೆರಗು.

ಕರಾವಳಿಯಲ್ಲಿ ಬ್ರಾಹ್ಮಣರಿಂದ ಸ್ಥಾಪಿತವಾದ, ಅವರೇ ಪೂಜೆ ನಡೆಸುವ ಅಸಂಖ್ಯ ದೇವಾಲಯಗಳಿವೆ. ಅವುಗಳಲ್ಲಿ ತೀರ ಮೊದಲಿನವು ಶಿವಾಲಯಗಳು. ಇವುಗಳಲ್ಲಿ ಯಾವುವೂ ಕ್ರಿ.ಶ. ಐದನೆಯ ಶತಮಾನಕ್ಕಿಂತ ಹಿಂದಿನವುಗಳಾಗಿ ಕಾಣಿಸುವುದಿಲ್ಲ. ಇಲ್ಲಿಗೆ ಬ್ರಾಹ್ಮಣರು ತಂದ ಧರ್ಮವನ್ನೂ, ದೇವರನ್ನೂ ಸ್ಥಳೀಕ ಜನರು ಕ್ರಮೇಣ ನಂಬಿ, ಪೂಜಿಸತೊಡಗಿದರು. ಕ್ರಿ.ಶ. ಆರಂಭದಿಂದ ಹತ್ತನೆಯ ಶತಮಾನದ ಅವಧಿಯಲ್ಲಿ ಬೌದ್ಧ ಧರ್ಮವೂ ಇಲ್ಲಿ ಪ್ರಸಾರಗೊಂಡಿತು. ಬುದ್ಧ ಸ್ತೂಪದ ಅವಶೇಷ ಬನವಾಸಿಯಲ್ಲಿ ಸಿಗುವಂತೆ, ದಕ್ಷಿಣ ಕನ್ನಡ ಜಿಲ್ಲೆಯ ಎರಡು ಕಡೆಗಳಲ್ಲೂ ಕಾಣಸಿಗುತ್ತವೆ. ಬೌದ್ಧರ ದೇವಾಲಯಗಳೂ ವಿಹಾರಗಳೂ ಇಲ್ಲಿ ಸ್ಥಾಪನೆಗೊಂಡಿದ್ದವು. ಏಳೆಂಟನೆಯ ಶತಮಾನದ ಸುಮಾರಿಗೆ ಜೈನ ಧರ್ಮವೂ ಈ ಕರಾವಳಿಯಲ್ಲಿ ಹಬ್ಬಿಕೊಂಡಿತು. ಅನಂತರ ಕಾಶ್ಮೀರದ ನಾಥ ಪಂಥದವರು ಈ

ಕರಾವಳಿಗೆ ಬಂದು ತಮ್ಮ ಪಂಥವನ್ನು ಪ್ರಸಾರ ಮಾಡಿದರು. ಅವರು ದುರ್ಗೆ ಮತ್ತು ಭೈರವ ದೇವತೆಗಳ ಆರಾಧಕರು.

ಎಂಟೊಂಬತ್ತನೆಯ ಶತಮಾನಗಳ ಅವಧಿಯಲ್ಲಿ ಪರ್ಷಿಯನ್ ಕೊಲ್ಲಿಯ ಪ್ರದೇಶದಿಂದ ಹಬ್ಬುತ್ತಿದ್ದ ಇಸ್ಲಾಂ ಧರ್ಮಕ್ಕೆ ಅಂಜಿ, ಅನೇಕರು ಹಡಗಿನ ಮಾರ್ಗವಾಗಿ ಈ ಕರಾವಳಿಗೆ ಬಂದು ನೆಲೆಸಿದ್ದೂ ಉಂಟು. ಮುಂದಣ ಶತಮಾನಗಳಲ್ಲಿ ವ್ಯಾಪಾರದ ಸಲುವಾಗಿ ಅರೇಬಿಯಾ, ಮೊರಕ್ಕೋ ಮೊದಲಾದ ದೇಶಗಳಿಂದ ಅರಬರು, ಸಿದ್ದಿಯರು ಈ ಕರಾವಳಿಗೆ ಬಂದು ನೆಲೆಸಿದ್ದುಂಟು. ಹತ್ತನೆಯ ಶತಮಾನಕ್ಕಿಂತ ಮೊದಲೇ ಪರ್ಷಿಯಾ ದೇಶದಿಂದ ಜಲಮಾರ್ಗವಾಗಿ ಕ್ರಿಶ್ಚನ್ ಪಂಥದವರು ಕಲ್ಯಾಣಪುರ ಎಂಬಲ್ಲಿ ಬಂದು ಸ್ಥಾಪನೆಯಾದುದುಂಟು. ಹದಿನಾರನೆಯ ಶತಮಾನದ ಸುಮಾರಿಗೆ ಇಂಗ್ಲಿಷರು ಮತ್ತು ಪೋರ್ಚುಗೀಸರು, ಇಲ್ಲಿಗೆ ಬರತೊಡಗಿದ ಮೇಲೆ ಯೂರೋಪಿನ ಕ್ರಿಶ್ಚನ್ ಪಾದ್ರಿಗಳು ಈ ಕರಾವಳಿಗೆ ಬಂದು ನೆಲೆಸಿ, ತಮ್ಮ ಮತಪ್ರಸಾರವನ್ನು ಮಾಡ ತೊಡಗಿದರು. ಹೀಗೆ ಈ ನಾಡಿನ ಸಂಸ್ಕೃತಿಯ ಮೇಲೆ, ಜನಗಳ ಮೇಲೆ ಹಲವಾರು ಧರ್ಮಗಳ ಪ್ರಭಾವ ಬೀಳತೊಡಗಿತು.

ಈ ಕರಾವಳಿಯ ತದಡಿ, ಭಟ್ಕಳ, ಮಂಗಳೂರು, ಬಾರಕೂರು, ಬಸರೂರು ಮೊದಲಾದ ರೇವುಗಳ ದೆಸೆಯಿಂದ ಹಲವು ಶತಮಾನಗಳಿಂದಲೂ ಕರಾವಳಿಯ ಜನ ಆಫ್ರಿಕ, ಅರೇಬಿಯ, ಸಿಂಹಳ ಮೊದಲಾದ ದೇಶಗಳೊಡನೆ ಹಡಗಿನ ಮೂಲಕ ಸಂಪರ್ಕ ಬೆಳೆಯಿಸಿ, ವ್ಯಾಪಾರ ನಡೆಯಿಸುತ್ತಿದ್ದರು. ವ್ಯಾಪಾರವೇ ಯೂರೋಪಿಯನರನ್ನೂ, ಅರಬರನ್ನೂ, ಸಿದ್ದಿಗಳನ್ನೂ ಇಲ್ಲಿಗೆ ಆಕರ್ಷಿಸಿದ ಶಕ್ತಿಯಾಗಿತ್ತು.

ಅಷ್ಟೆಲ್ಲ ವ್ಯಾಪಾರ ನಡೆದರೂ, ಈ ದೇಶದ ಅನ್ನಸಂಪತ್ತಿನಿಂದಾಗಿ ಇಲ್ಲಿನ ಜನರು ಪರದೇಶಗಳಿಗೆ ಹೋಗಿ ಅಲ್ಲಿ ನೆಲೆಸಿದ್ದು ಕಡಿಮೆ. ಅಲ್ಲಿನವರೇ ಇಲ್ಲಿಗೆ ಬಂದು ನೆಲೆಸಿದ್ದು ಹೆಚ್ಚು. ಇದರಿಂದ ನಮಗೆ ಅಪಕಾರವೂ ಆಯಿತು; ಉಪಕಾರವೂ ಆಯಿತು. ವ್ಯಾಪಾರೋದ್ಯಮ ಬೆಳೆಯಿತು; ಕರಾವಳಿಯ ಅನೇಕರು ಹಡಗುಗಳಲ್ಲಿ ಕಲಾಸಿಗಳಾಗಿ ಜೀವನ ನಡೆಯಿಸಿದರು. ಇಂಗ್ಲಿಷರಿಂದ, ಪೋರ್ಚುಗೀಸರಿಂದ, ಡಚ್ಚರಿಂದ ಇಲ್ಲಿ ಮಳಿಗೆಗಳೂ, ಕಾರ್ಖಾನೆಗಳೂ ಸ್ಥಾಪನೆಗೊಂಡವು. ಇಲ್ಲಿನ ಕೈಗಾರಿಕೆಗಳು ಹೆಚ್ಚಿದವು. ಬಟ್ಟೆಬರೆಗಳ ತಯಾರಿ, ಹುರಿಹಗ್ಗದ ತಯಾರಿ, ಹಂಚಿನ ತಯಾರಿ ಮೊದಲಾದವು ದೊಡ್ಡ ಪ್ರಮಾಣದಲ್ಲಿ ಬೆಳೆದವು. ಇಲ್ಲಿನ ಹಂಚು, ಹಗ್ಗ, ಒಳನಾಡುಗಳಲ್ಲಿ ಉತ್ಪನ್ನವಾಗುತ್ತಿದ್ದ ಬಟ್ಟೆಬರೆ, ಉಪ್ಪು, ಬೆಲ್ಲ ಮೊದಲಾದವು ವಿದೇಶಗಳಿಗೆ ರಫ್ತಾಗತೊಡಗಿದವು.

ಮಂಗಳೂರು, ಕುಮಟೆ, ಹೊನ್ನಾವರಗಳು ದೊಡ್ಡ ವ್ಯಾಪಾರದ ಕೇಂದ್ರಗಳಾದುವು. ಬಾರಕೂರು, ಬಸರೂರಿನಂಥ ನದಿ ರೇವುಗಳು ತಮ್ಮ ಪ್ರಸಿದ್ಧಿಯನ್ನು ಕ್ರಮೇಣ ಕಳೆದುಕೊಂಡವು. ಅವುಗಳಲ್ಲಿ ಮಂಗಳೂರಿನಲ್ಲಂತು ಹಲವಾರು ಉದ್ಯಮಗಳು ಹುಟ್ಟಿಕೊಂಡು ಅದರ ಸಂಪತ್ತು ಅನೇಕರ ಕಣ್ಣನ್ನು ಕುಕ್ಕಿತು. ವಿದೇಶದಿಂದ ಬಂದ ಇಂಗ್ಲಿಷರೊಡನೆ ಫ್ರೆಂಚರು ಅದಕ್ಕಾಗಿ ಹಾತೊರೆದರು. ಈ ನಗರಕ್ಕಾಗಿ ಮೈಸೂರಿನ ದೊರೆಯಾಗಿದ್ದ ಹೈದರಾಲಿ, ಟಿಪ್ಪೂ ಸುಲ್ತಾನರು ಬ್ರಿಟಿಷರೊಡನೆ ಕಾದಾಡಿದರು. ಇದಲ್ಲದೆ ಈ ನಾಡಿನ ತುಂಡರಸರೊಳಗೂ ಆಗಾಗ ಯುದ್ಧ ನಡೆಯುತ್ತಲೇ ಇತ್ತು.

ಪರದೇಶೀಯರಿಂದ ಈ ಕರಾವಳಿಗೆ ಉಂಟಾದ ಉಪ

ಕಾರವನ್ನೂ ನಾವು ಮರೆಯುವಂತಿಲ್ಲ. ಇಲ್ಲಿಗೆ ಕ್ರಿಶ್ಚನ್ ಮತಪ್ರಸಾರಕ್ಕಾಗಿ ಬಂದವರು, ಅದರಲ್ಲಿಯೂ ಪ್ರೊಟೆಸ್ಟಾಂಟ್ ಮತದ 'ಬಾಸೆಲ್ ಮಿಷನ್' ಎಂಬ ಸಂಸ್ಥೆಯವರು ಮಂಗಳೂರಿನಲ್ಲಿ ಹಲವು ಉದ್ಯಮಗಳನ್ನು ಸ್ಥಾಪಿಸಿದರು. ಅಲ್ಲದೆ ಒಂದು ದೊಡ್ಡ ಛಾಪಖಾನೆಯನ್ನೂ ತೆರೆದರು. ಅದರಲ್ಲಿ ತಮ್ಮ ಧರ್ಮಗ್ರಂಥಗಳನ್ನು ಅಚ್ಚು ಹಾಕಿಸಿದರು. ಹಾಗೆಯೇ ಇಲ್ಲಿನ ಭಾಷೆಗಳಾದ ತುಳು, ಕನ್ನಡಗಳನ್ನು ಅಭ್ಯಸಿಸಿ ಹಲವಾರು ಅಪೂರ್ವ ಗ್ರಂಥಗಳನ್ನು ಪ್ರಕಟಿಸಿದರು. ಅದಕ್ಕಿಂತ ಹೆಚ್ಚಾಗಿ, ಹಲವು ವಿದ್ಯಾಸಂಸ್ಥೆಗಳನ್ನು ತೊಡಗಿದ ಸಾಹಸ ಅವರದ್ದು. ಇಲ್ಲಿನ ಸರಕಾರಕ್ಕಿಂತ ಹೆಚ್ಚಿನ ಉತ್ಸಾಹದಿಂದ ಅವರು ಶಾಲೆಗಳನ್ನು ತೆರೆದರು. ಈ ಉತ್ಸಾಹ ಮುಂದೆ ಸ್ಥಳೀಕ ಜನರಲ್ಲಿಯೂ ಹಬ್ಬಿ, ಅವರೂ ಖಾಸಗಿ ವಿದ್ಯಾಸಂಸ್ಥೆಗಳನ್ನು ತೆರೆಯ ತೊಡಗಿದರು. ಇದರಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣ ಸಂಸ್ಥೆಗಳು ಬಲು ವೇಗವಾಗಿ ಬೆಳೆದುವು. ಉದ್ಯಮ ಮತ್ತು ಶಿಕ್ಷಣಗಳ ದೃಷ್ಟಿಯಿಂದ ದಕ್ಷಿಣ ಕನ್ನಡದ ನೆರೆ ಜಿಲ್ಲೆಯಾದ ಉತ್ತರ ಕನ್ನಡ ಜಿಲ್ಲೆಯಲ್ಲಿ ಅಷ್ಟೊಂದು ಬೆಳವಣಿಗೆ ಉಂಟಾಗಲಿಲ್ಲ. ಅದಕ್ಕೆ ಮುಖ್ಯ ಕಾರಣವೆಂದರೆ ಕ್ರಿಶ್ಚನ್ ಪಂಥದ ಪ್ರೊಟೆಸ್ಟಾಂಟ್ ಮತ್ತು ಕೆಥೊಲಿಕ್ ಸಂಸ್ಥೆಗಳ ಕೇಂದ್ರ ಮಂಗಳೂರಿನಲ್ಲಿಯೇ ಸ್ಥಾಪನೆಗೊಂಡು, ಅಲ್ಲಿಂದಲೇ ಕಾರ್ಯ ತೊಡಗಿದ್ದು. ಅವರ ಎಟುಕಿಗೆ ಉತ್ತರ ಕನ್ನಡ ಜಿಲ್ಲೆ ಸಾಕಷ್ಟು ದೂರದಲ್ಲಿತ್ತು. ಅಲ್ಲದೆ, ಇನ್ನೊಂದು ವಿಚಿತ್ರ ಕಾರಣವೂ ಆ ಜಿಲ್ಲೆಯ ಹಿಂದುಳಿಕೆಗೆ ನೆಪವಾಯಿತು. ಈ ಎರಡೂ ಜಿಲ್ಲೆಗಳು ದೇಶೀಯ ಅರಸರ ಸ್ವಾಧೀನ ತಪ್ಪಿ ೧೮೦೦ರ ಬಳಿಕ, ಬ್ರಿಟಿಷರು ನಡೆಸುತ್ತಿದ್ದ 'ಈಸ್ಟ್ ಇಂಡಿಯಾ ಕಂಪೆನಿ'ಯ ವಶಕ್ಕೆ ಹೋದುವು. ಮುಂದಿನ ಮೂರು ದಶಕಗಳಲ್ಲಿ

ಬ್ರಿಟಿಷ್ ಸಾಮ್ರಾಜ್ಞಿ, ಈ ಪ್ರದೇಶದ ಆಡಳಿತವನ್ನು ಕಂಪೆನಿಯ ಕೈಯಿಂದ ತನ್ನ ವಶಕ್ಕೆ ತೆಗೆದುಕೊಂಡಳು. ಆ ಕಾಲಕ್ಕೆ ಇಂಡಿಯ ಭರತಖಂಡ ಬಹುಮಟ್ಟಿಗೆ ಬ್ರಿಟಿಷರ ಅಧೀನಕ್ಕೆ ಸಂದಿತ್ತು. ಅವರು ತಮ್ಮ ಆಡಳಿತೆಯ ಸೌಕರ್ಯಕ್ಕಾಗಿ ಭಾರತವನ್ನು ವಿವಿಧ ಪ್ರಾಂತಗಳನ್ನಾಗಿ ಒಡೆದರು. ಕರ್ನಾಟಕದ ಕರಾವಳಿಯ ಯಾವತ್ತು ಪ್ರದೇಶ ಮದ್ರಾಸು ಸಂಸ್ಥಾನಕ್ಕೆ ಸೇರಿತು.

ಬ್ರಿಟಿಷ್ ಸಾಮ್ರಾಜ್ಯ ಬೆಳೆಯುವುದಕ್ಕೆ ಅವರ ನೌಕಾ ಬಲವೇ ಮುಖ್ಯ ಕಾರಣವಾಗಿತ್ತು. ಹಿಂದಣ ಕಾಲದಲ್ಲಿ ನೌಕೆಯ ಹಡಗುಗಳನ್ನು ಮರದಿಂದ ನಿರ್ಮಿಸುತ್ತಿದ್ದರು. ಇಂಥ ಹಡಗುಗಳಿಗೆ ಮಚ್ವೆ, ಮಂಜಿ, ಪತ್ತೇಮಾರಿ, ಪಡಾವು–ಎಂಬೆಲ್ಲ ಹೆಸರುಗಳು ಅವುಗಳ ಗಾತ್ರಕ್ಕೆ ಸಮನಾಗಿ ರೂಢಿಯಲ್ಲಿದ್ದುವು. ಇವನ್ನು ಕಟ್ಟುವ ಉದ್ಯಮ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರದಲ್ಲಿ ವಿಶೇಷವಾಗಿ ಬೆಳೆದಿತ್ತು. ಉತ್ತರ ಕನ್ನಡ ಜಿಲ್ಲೆಯಲ್ಲಿ ಅರಣ್ಯಗಳ ದಟ್ಟಣೆ ಹೆಚ್ಚಾಗಿದ್ದುದರಿಂದ ಹಡಗು ನಿರ್ಮಾಣಕ್ಕೆ ಬೇಕಾದ ಮರಮುಟ್ಟು ಧಾರಾಳವಾಗಿತ್ತು. ಅಲ್ಲಿನ ಅರಣ್ಯಗಳ ಮೇಲೆ ಬ್ರಿಟಿಷ್ ಸರಕಾರದ ಕಣ್ಣು ಬಿತ್ತು. ಅವರು ಒಂದಾಗಿದ್ದ ಕನ್ನಡ ಕರಾವಳಿಯನ್ನು, ಉತ್ತರ ದಕ್ಷಿಣ ಕನ್ನಡಗಳೆಂದು ಎರಡು ಜಿಲ್ಲೆಗಳಾಗಿ ಒಡೆದರು. ಉತ್ತರದ ಭಾಗವನ್ನು ಮುಂಬಯಿ ಅಧಿಪತ್ಯಕ್ಕೆ ಸೇರಿಸಿದರು; ದಕ್ಷಿಣ ಕನ್ನಡವು ಮದ್ರಾಸ್ ಸಂಸ್ಥಾನಕ್ಕೆ ಹೋಯಿತು. ಅಷ್ಟೇ ಅಲ್ಲ, ಬ್ರಿಟಿಷ್ ರಾಣಿಯ ನೌಕಾಪಡೆಗೆ ಬೇಕಾಗುವ ಮರಮುಟ್ಟುಗಳ ಆಸೆಯಿಂದ ಅವರು ಉತ್ತರ ಕನ್ನಡ ಜಿಲ್ಲೆಯ ಯಾವತ್ತು ಪ್ರದೇಶವನ್ನು ಅರಣ್ಯವನ್ನಾಗಿ ಕಾದಿಡುವ ಉಪಾಯ ಹೂಡಿದರು. ಈ ಅರಣ್ಯಗಳ ನಡು ನಡುವೆ ಹೊಲ ಗದ್ದೆಗಳನ್ನು ಮಾಡಿಕೊಂಡು ನೆಲೆಸಿದ

ಜನರನ್ನು ಅಲ್ಲಿಂದ ಅಟ್ಟಿಯೂ ಬಿಟ್ಟರು. ಸುಮಾರು ಇದೇ ಕಾಲಕ್ಕೆ ಈ ಪ್ರದೇಶದಲ್ಲಿ ಮಲೇರಿಯಾ ಬೇನೆ ಬಹಳವಾಗಿ ಹಬ್ಬಿಕೊಂಡು, ಬಹಳ ಜನರು ಸತ್ತು, ಜನಸಂಖ್ಯೆ ತೀರ ಕಡಿಮೆಯಾಯಿತು. ಕಾಡುಗಳು ಹಬ್ಬಿ, ಅದರ ಜತೆಗೆ ಮಲೇರಿಯವೂ ಹಬ್ಬಿ, ಉತ್ತರ ಕನ್ನಡ ಜಿಲ್ಲೆಯ ವಿಶೇಷ ಜನಸಂಖ್ಯೆ ಒಂದೆರಡು ದಶಕಗಳೊಳಗಾಗಿ ನೋವು ಸಾವುಗಳಿಗೆ ಗುರಿಯಾಯಿತು. ಇದೊಂದು ದಾರುಣ ಕಥೆ. ಒಬ್ಬಿಬ್ಬರು ಬ್ರಿಟಿಷ್ ಅಧಿಕಾರಿಗಳು ಜನರಿಗಾದ ಈ ಅನ್ಯಾಯವನ್ನು ತಿದ್ದಬೇಕೆಂದು ಬ್ರಿಟಿಷ್ ರಾಣಿಗೆ ಮೊರೆಯಿಟ್ಟರೂ ಅದರಿಂದ ಪ್ರಯೋಜನವಾಗಲಿಲ್ಲ. ವನಸಮೃದ್ಧವಾದ ಉತ್ತರ ಕನ್ನಡ ಜಿಲ್ಲೆ ಕಡುದಾರಿದ್ರ್ಯದಿಂದ ಕುಗೆಡುವಂತಾಯಿತು.

೩

ಕರ್ನಾಟಕದ ಕರಾವಳಿಯ ಸೌಂದರ್ಯ ಬಣ್ಣಿಸಲಾರದ್ದು. ಅಲ್ಲಿನ ಕಡಲು, ಕಡಲಿನ ಕರೆ, ಗುಡ್ಡಬೆಟ್ಟಗಳು, ಪಶ್ಚಿಮ ಘಟ್ಟದ ಗೋಡೆ, ಅಸಂಖ್ಯ ನದಿಗಳು ಕಾಣುವವರ ಕಣ್ಣಿಗೆ ಇನ್ನಿಲ್ಲದಂಥ ಹಬ್ಬ. ಅಂಥ ವನರಾಜ್ಯದಲ್ಲಿ ಜೀವಿಸಿಕೊಂಡಿರುವ ಪಶು ಪಕ್ಷಿಗಳ ಸಮೃದ್ಧಿಯೂ ಅಷ್ಟೇ ಮೋಹಕವಾದ ಆಕರ್ಷಣೆ. ಅವನ್ನೆಲ್ಲ ಕುರಿತು ಇದೇ ಗ್ರಂಥಮಾಲೆಯ ಇನ್ನೊಂದು ಪುಸ್ತಕ ದಲ್ಲಿ ತಿಳಿಸಿದೆ. ಈ ಚಿಕ್ಕ ಬರಹದಲ್ಲಿ—ಈ ಕರಾವಳಿ ಪ್ರದೇಶದಲ್ಲಿ ನೆಲೆಸಿದ ಜನರು ಏನೆಲ್ಲ ಮಾಡಿಕೊಂಡಿದ್ದಾರೆ—ಎಂಬುದರ ಸ್ಥೂಲ ಚಿತ್ರವನ್ನಷ್ಟೇ ಕೊಡುತ್ತಿದ್ದೇನೆ.

ಈ ಕರಾವಳಿಯ ಹಲವಾರು ಸ್ಥಳಗಳು ಯಾತ್ರಾಸ್ಥಳ ಗಳಾಗಿ ಕೆಲವೊಂದು ಶತಮಾನಗಳಿಂದ ಪ್ರಸಿದ್ಧಿಗೆ ಬಂದಿವೆ. ಅವುಗಳಲ್ಲಿ ಕೆಲವು ಈ ಪ್ರದೇಶದ ಜನಗಳಿಗೆ ಮಾತ್ರವಲ್ಲ,

ಕರ್ನಾಟಕದ ಮತ್ತು ಹೊರಗಿನ ಜನಗಳಿಗೂ ಯಾತ್ರಾಸ್ಥಳಗಳಾಗಿವೆ. ಅಂಥ ಕೆಲವು ಸ್ಥಳಗಳನ್ನು ನಾವು ನೋಡಿ ಆನಂದ ಪಡಬಹುದು.

ಉತ್ತರ ಕನ್ನಡ ಜಿಲ್ಲೆಯ ಕಡಲು ತೀರದ ಗೋಕರ್ಣ ಕ್ಷೇತ್ರ ಮಹಾಬಲೇಶ್ವರ (ಶಿವ) ಎಂಬ ದೇವರಿಗೆ ಹೆಸರಾದ ಒಂದು ಸ್ಥಳ. ಇಲ್ಲಿಗೆ ನೆರೆಕೆರೆಯ ಪ್ರಾಂತಗಳಿಂದ ಯಾತ್ರಿಕರು ಸದಾ ಬರುತ್ತಿರುತ್ತಾರೆ. ಕಡಲ ದಂಡೆಯ ಮೇಲೆಯೇ ಮಹಾಬಲೇಶ್ವರನ ಪ್ರಾಚೀನ ದೇವಾಲಯವಿದೆ. ಇಲ್ಲಿ, ರಾಮಾಯಣ ಕಾಲದ ರಾವಣ ಶಿವನನ್ನು ಪೂಜಿಸಿದನೆಂಬ ಕತೆಯಿದೆ. ಶಿವರಾತ್ರಿಯ ವೇಳೆ ಇಲ್ಲಿ ನಡೆಯುವ ಉತ್ಸವಕ್ಕೆ ವಿಪರೀತ ಜನ ಸಂದಣಿ ಕಲೆಯುತ್ತದೆ. ಹಿಂದಣ ಶತಮಾನಗಳಲ್ಲಿ ಇಲ್ಲಿ ಶಾಸ್ತ್ರಾಭ್ಯಾಸ ನಡೆಸುತ್ತಿದ್ದ ಅನೇಕ ವಿದ್ವಾಂಸರಿದ್ದರು. ಇದೊಂದು ವಿದ್ಯಾಕ್ಷೇತ್ರವೂ ಆಗಿತ್ತು. ಅದಲ್ಲದೆ, ಹಿಂದೂಧರ್ಮದ ಅನೇಕ ಬಳಗದವರು, ಗತಿಸಿದ ತಮ್ಮ ಪಿತೃಗಳ ಸಂಸ್ಕಾರಕ್ಕಾಗಿ ಇಲ್ಲಿಗೆ ಬಂದು ಶ್ರಾದ್ಧಾದಿ ಕರ್ಮಗಳನ್ನು ನಡೆಯಿಸುವ ಪರಿಪಾಠ ಉಳಿದುಕೊಂಡು ಬಂದಿದೆ.

ಇಲ್ಲಿಂದ ನೇರ ಪೂರ್ವಕ್ಕೆ, ಪಶ್ಚಿಮ ಘಟ್ಟದ ನಟ್ಟನಡುವೆ 'ಯಾಣ' ಎಂಬ ಮತ್ತೊಂದು ಪ್ರಸಿದ್ಧ ಸ್ಥಳವಿದೆ. ಇದು ನಾಥ ಪಂಥದ ಭಕ್ತರು ಸ್ಥಾಪಿಸಿದ ಒಂದು ಕ್ಷೇತ್ರ. ಈ ಕ್ಷೇತ್ರದ ಪ್ರಸಿದ್ಧಿ ಎರಡು ನೈಸರ್ಗಿಕ ದೇವಾಲಯಗಳಿಂದ ಬಂದಿದೆ. ೪೦೦–೫೦೦ ಅಡಿ ಎತ್ತರದ ಸುಣ್ಣದ ಕಲ್ಲಿನ ಬಂಡೆಗಳು, ಯುಗಯುಗದ ಮಳೆಯಿಂದ ಸವೆದು, ಕೊರೆದು ದೆವ್ವಗಾತ್ರದ ಹುತ್ತದ ಆಕಾರದ ದೇವಾಲಯಗಳಂತೆ ಇಲ್ಲಿ ನಿಂತಿವೆ. ಅವುಗಳ ಒಳಗಡೆ ಮಳೆನೀರು ಕೊರೆದು ಉಂಟಾದ ಗುಹೆಗಳಿವೆ. ಅಂಥ ಒಂದು ನೈಸರ್ಗಿಕ



ಗೋಕರ್ಣದ ದೇವಾಲಯ

ಗುಹಾಬೆಟ್ಟವನ್ನು 'ಭೈರವನ ದೇಗುಲ'ವೆಂದೂ, ಸಮೀಪದ ಅಂಥವೇ ಇನ್ನೊಂದನ್ನು 'ಚಂಡಿಯ ದೇಗುಲ'ವೆಂದೂ ಕರೆಯು ತ್ತಾರೆ. ಇಂದು ಈ ಸ್ಥಳಕ್ಕೆ ಹೋಗಲು, ಸಮನಾದ ಹಾದಿ ಯಿಲ್ಲದೆ ತನ್ನ ಪ್ರಸಿದ್ಧಿಯನ್ನು ಕಳೆದುಕೊಂಡಿದ್ದರೂ, ಇಂಥ ನೈಸರ್ಗಿಕ ಗುಡಿಗಳು ದಕ್ಷಿಣ ದೇಶದ ಇನ್ನೆಲ್ಲೂ ಕಾಣಸಿಗವು.

ಶರಾವತಿ ನದಿ ದಂಡೆಯ 'ಗೇರುಸೊಪ್ಪೆ' ಎಂಬುದು ಪುರಾತನ ಪ್ರಸಿದ್ಧಿಯ ಇನ್ನೊಂದು ಸ್ಥಳ. ಹಿಂದೆ ಗೇರುಸೊಪ್ಪೆ ಒಂದು ಜೈನ ಅರಸು ವಂಶದ ರಾಜಧಾನಿಯಾಗಿತ್ತು. 'ನಗಿರೆ' ಎಂದು ಆ ರಾಜಧಾನಿಗೆ ಹೆಸರು. ಅದೆಲ್ಲವೂ ಇಂದು ಹಾಳು ಬಿದ್ದಿದೆ. ನಗರವಿದ್ದ ತಾವಿನಲ್ಲಿ ಕಾಡು ಬೆಳೆದಿದೆ. ಆದರೂ ಅಲ್ಲಿ ರುವ ಬಸದಿಗಳು, ಹಲವಾರ ಜಿನ ಮೂರ್ತಿಗಳು ತಮ್ಮ ವೈಭವದ ಕಾಲದಲ್ಲಿ ಜನರನ್ನು ಆಕರ್ಷಿಸುತ್ತಿದ್ದವು. ಇಲ್ಲಿಯ ಜಲಪಾತ ಸುಪ್ರಸಿದ್ಧ.

ಇದೇ ಜಿಲ್ಲೆಯ ದಕ್ಷಿಣದಲ್ಲಿ ಇನ್ನೊಂದು ಐತಿಹಾಸಿಕ ಸ್ಥಳವಿದೆ. ಅದರ ಹೆಸರು 'ಹಾಡುವಳ್ಳಿ'ಅಥವಾ'ಸಂಗೀತಪುರ'. ಹಿಂದೆ ಇದು ಒಂದು ಜೈನ ಅರಸು ವಂಶದ ರಾಜಧಾನಿಯಾ ಗಿತ್ತು. ಆ ಕಾಲಕ್ಕೆ ಇಲ್ಲಿನ ಎರಡು ಬೆಟ್ಟಗಳ ಮೇಲೂ, ಅವುಗಳ ತಗ್ಗಿನಲ್ಲೂ ಹಲವಾರು ಬಸದಿಗಳನ್ನು ಕಟ್ಟಿದರು. ಅಂಥ ಒಂದು ಬಸದಿಯಲ್ಲಿ–ಒಂದೇ ಸಾಲಲ್ಲಿ ೨೪ ಜೈನ ತೀರ್ಥಂಕರರ ಸುಂದರ ಮೂರ್ತಿಗಳಿವೆ. ಹಿಂದೆ ಇದೊಂದು ದೊಡ್ಡ ಯಾತ್ರಾಸ್ಥಳ ವಾಗಿತ್ತು.

ಇಲ್ಲಿಂದ ಹನ್ನೆರಡು ಮೈಲು ಪಡುವಣಕ್ಕಿರುವ ನಗರವೇ ಪುರಾತನ ಪ್ರಸಿದ್ಧಿಯ ಭಟ್ಕಳ. ವಿಜಯನಗರ ದೊರೆಗಳ ಕಾಲದಲ್ಲಿ ಇದೊಂದು ದೊಡ್ಡ ರೇವಾಗಿತ್ತು ; ವಿದೇಶಗಳೊಡನೆ ವ್ಯಾಪಾರ ನಡೆಯಿಸುವ ಕೇಂದ್ರವಾಗಿತ್ತು. ಈ ಭಟ್ಕಳ

ದಲ್ಲೂ ಒಂದು ಅರಸು ಮನೆತನ ಆಳಿಕೊಂಡಿತ್ತು. ಆ ಕಾಲಕ್ಕೆ ಕಟ್ಟಿದ ಹಲವಾರು ಬಸದಿಗಳು ಇಲ್ಲಿನ ಪುರಾತನ ವೈಭವಕ್ಕೆ ಸಾಕ್ಷಿಯಾಗಿವೆ. ಭಟ್ಕಳದಿಂದ ನಾಲ್ಕೈದು ಮೈಲು ದಕ್ಷಿಣಕ್ಕೆ ಸರಿದರೆ–ದಕ್ಷಿಣ ಕನ್ನಡ ಜಿಲ್ಲೆ ತೊಡಗುತ್ತದೆ. ನಾವು ಅಲ್ಲಿನ ಒಂದೊಂದೇ ಸ್ಥಳಗಳನ್ನು ನೋಡುತ್ತಾ ಸಂತೋಷಪಡುವುದು ಸಾಧ್ಯ. ಹಾಗೆ ಕಾಣಸಿಗುವ ಮೊದಲಿನ ತಾವು–ಕರಾವಳಿಯು ರೇವು ಆದ ಬೈಂದೂರಿನಿಂದ, ೧೮ ಮೈಲು ಪೂರ್ವಕ್ಕಿರುವ ಒಂದು ಕ್ಷೇತ್ರ. ಅದರ ಹೆಸರು ಕೊಲ್ಲೂರು. ಇದು ಪಶ್ಚಿಮ ಘಟ್ಟದ ಬುಡದಲ್ಲಿದೆ.

ಕೊಲ್ಲೂರಿನ ಪ್ರಾಚೀನ ದೇವಾಲಯ ವಿಶಾಲವೂ, ದೊಡ್ಡದೂ ಆದದ್ದು. ಅಲ್ಲಿನ ದೇವತೆಯ ಹೆಸರು ಮೂಕಾಂಬಿಕೆ ಎಂದು. ಕೆಳದಿಯ ಅರಸು ಮನೆತನದವರು ಈ ದೇವತೆಯ ಭಕ್ತರಾಗಿದ್ದರು. ಪ್ರಾಯಶಃ ಎರಡು ಸಾವಿರ ವರ್ಷಗಳಷ್ಟು ಹಿಂದೆಯೇ ಇಲ್ಲೊಂದು 'ಅಮ್ಮ'ನವರ ಗುಡಿಯಿದ್ದಿರಬೇಕು. ಅದ್ವೈತ ಮತ ಸ್ಥಾಪಕರಾದ ಶಂಕರಾಚಾರ್ಯರು ಇಲ್ಲಿಗೆ ಒಮ್ಮೆ ಬಂದಿದ್ದರೆನ್ನುತ್ತಾರೆ. ಇಲ್ಲಿಗೆ ಹಿಂದೂ ಯಾತ್ರಿಕರು ಸದಾ ಬಂದುಹೋಗುತ್ತಿರುತ್ತಾರೆ. ನೆರೆಯ ಕೇರಳ ದೇಶದಿಂದ ನವರಾತ್ರಿಯ ಹೊತ್ತಿಗೆ ಮೂಕಾಂಬಿಕೆಯ ದರ್ಶನಕ್ಕೆಂದು ಬರುವ ಜನರು ಬಹಳ.

ಕರಾವಳಿಯ ಬೈಂದೂರಿನಿಂದ ಸುಮಾರು ೩೦ ಮೈಲು ದಕ್ಷಿಣಕ್ಕೆ, ಕಡಲ ಕಿನಾರೆಯ ಮೂರು ಮೈಲು ಸಮೀಪದಲ್ಲಿ 'ಉಡುಪಿ' ಎಂಬ ಕ್ಷೇತ್ರ ಸಿಗುತ್ತದೆ. ಇಲ್ಲಿನ ಕೃಷ್ಣ ದೇವರು ಮತ್ತು ಆತನ ಅರ್ಚಕರಾದ ಎಂಟು ಮಠಗಳ ಯತಿಗಳು ಕರ್ನಾಟಕದಲ್ಲೆಲ್ಲ ಸುಪ್ರಸಿದ್ಧ. ಸುಮಾರು ಎಂಟೊಂಬತ್ತನೆಯ ಶತಮಾನದಿಂದಲೂ ಈ ದೇವಸ್ಥಾನ ಅಸ್ತಿತ್ವದಲ್ಲಿದ್ದು, ಇದನ್ನು

ಎರಡು ಮೂರು ಬಾರಿ ಜೀರ್ಣೋದ್ಧಾರ ಮಾಡಿದ ದಾಖಲೆ ಗಳಿವೆ. ಇದರ ಪ್ರಸಿದ್ಧಿ ಹೆಚ್ಚುವುದಕ್ಕೆ ಇಲ್ಲಿಯೇ ಹುಟ್ಟಿ ಬೆಳೆದು, ಮುಂದೆ 'ದ್ವೈತ' ಮತ ಸಂಪ್ರದಾಯವನ್ನು ಸ್ಥಾಪಿಸಿದಂಥ 'ಮಧ್ವಾಚಾರ್ಯರು' ಮುಖ್ಯ ಕಾರಣ. ಅವರು ತಮ್ಮ ದುಃಖ್ಖದಲ್ಲಿ ಈ ಕ್ಷೇತ್ರವನ್ನು ಬಿಡುವ ಮುನ್ನ, ಎಂಟು ಮಂದಿ ಶಿಷ್ಯರಿಗೆ ಪಟ್ಟ ಕಟ್ಟಿದರು. ಅವರೆಲ್ಲರೂ ಎರಡೆರಡು ವರ್ಷಗಳ ಸರದಿಯಿಂದ ಇಲ್ಲಿನ ಶ್ರೀಕೃಷ್ಣನಿಗೆ ಪೂಜೆ ಸಲ್ಲಿಸಿ ನಡೆಸುಕೊಳ್ಳುತ್ತಾರೆ. ಉಡುಪಿ ಇಂದು ದೊಡ್ಡ ನಗರವಾಗಿ ಬೆಳೆದುಕೊಂಡಿರುವುದಲ್ಲದೆ ಆಧುನಿಕ ವಿದ್ಯಾಭ್ಯಾಸದ ಒಂದು ಕ್ಷೇತ್ರವಾಗಿಯೂ ಪ್ರಸಿದ್ಧಿಗೆ ಬಂದಿದೆ.

ಹಿಂದೂ ಧರ್ಮಕ್ಷೇತ್ರಗಳಲ್ಲಿ ಈ ಜಿಲ್ಲೆಯ ಇನ್ನೂ ಮೂರು ಸ್ಥಳಗಳನ್ನು ಇಲ್ಲಿ ಹೆಸರಿಸಬಹುದು. ಅವುಗಳಲ್ಲಿ ಒಂದು–ಮಂಗಳೂರಿನ ಕದಿರೆ, ಇನ್ನೆರಡು–ಧರ್ಮಸ್ಥಳ ಮತ್ತು ಸುಬ್ರಹ್ಮಣ್ಯಗಳು.

ಈ ಜಿಲ್ಲೆಯನ್ನು ಆಳುತ್ತಿದ್ದ ಅಲೂಪ ವಂಶದ ದೊರೆಗಳ ಕಾಲದಲ್ಲಿ ಮಂಗಳೂರಿನ ಒಂದು ಭಾಗವಾದ 'ಕದ್ರಿ' ಎಂಬಲ್ಲಿ ಒಂದು ಬೌದ್ಧ ವಿಹಾರವಿತ್ತು. ಈಗ ಅದು 'ಮಂಜುನಾಥ'ನೆಂಬ ಶಿವಾರಾಧನೆಯ ಕ್ಷೇತ್ರವಾಗಿದೆ. ಇಲ್ಲಿನ ಪುರಾತನ ದೇಗುಲದಲ್ಲಿ ಬುದ್ಧ, ಮಂಜುಶ್ರೀ ಮತ್ತು ಅವಲೋಕಿತೇಶ್ವರರ ಬಲು ಸುಂದರ ಕಂಚಿನ ಮೂರ್ತಿಗಳಿವೆ. ಈ ಬೌದ್ಧ ಕ್ಷೇತ್ರಕ್ಕೆ ಕಾಲಾಂತರದಲ್ಲಿ ಕಾಶ್ಮೀರದಿಂದ ನಾಥಪಂಥದ ಗುರುಗಳಾದ ಮತ್ಸ್ಯೇಂದ್ರನಾಥ, ಘೋರಕನಾಥ ಎಂಬುವರು ಬಂದು ಇಲ್ಲಿನ ಗುಡ್ಡದ ಮೇಲೆ ತಮ್ಮ ಮಠವನ್ನು ಸ್ಥಾಪಿಸಿದರು. 'ಜೋಗಿ ಮಠ' ಎಂಬ ಹೆಸರು ಅದಕ್ಕೆ ಬಂತು. ನಾಥಪಂಥದ ಗುರುಗಳಿಗೆ 'ಯೋಗಿ'ಗಳೆಂಬ ಬಿರುದಿತ್ತು. ಆ 'ಯೋಗಿ' ಪದವೇ ಕನ್ನಡದ 'ಜೋಗಿ' ಆಯಿತು.

ಜೋಗಿಗಳು ಶಿವನ, ಅದರಲ್ಲೂ ಅವನ ರೂಪವಾದ ಭೈರವನ ಭಕ್ತರು. ಇಲ್ಲಿನ ಮಠಕ್ಕೆ ಹಲವು ಶತಮಾನಗಳಿಂದಲೂ ಕಾಶ್ಮೀರದ ನಾಥ ಪಂಥದ ಗುರುಗಳನ್ನು ಪ್ರತಿ ಹದಿನೆರಡು ವರ್ಷಗಳಿಗೊಮ್ಮೆ ನೇಮಿಸುವ ವಾಡಿಕೆ ರೂಢಿಯಲ್ಲಿದೆ. ಕದ್ರಿಯ ಈ ದೇವಾಲಯ ಒಂದು ಗುಡ್ಡದ ತಗ್ಗಿನಲ್ಲಿದೆ; ಅದಕ್ಕಿಂತ ತುಸು ಎತ್ತರದಲ್ಲಿ ನಾಲ್ಕೆಂಟು ಸುಂದರವಾದ ಕೊಳಗಳಿವೆ, ಮತ್ತೂ ಎತ್ತರಕ್ಕೆ ಜೋಗಿ ಮಠವಿದೆ. ಇಲ್ಲಿನ ಗುಡ್ಡದ ತುದಿಯನ್ನೇರಿ ನೋಡಿದಾಗ ಕಾಣ ಸಿಗುವ ನೈಸರ್ಗಿಕ ದೃಶ್ಯ ಅತ್ಯಂತ ವಿಸ್ತಾರವಾದದ್ದು; ಮನೋಹರವಾದದ್ದು; ಅಚ್ಚರಿ ಹುಟ್ಟಿಸುವಂಥದು. ಈ ನಗರದ ಇನ್ನುಳಿದ ವಿಷಯಗಳನ್ನು ಕುರಿತು ಮುಂದೆ ಹೇಳುತ್ತೇನೆ.

ಧರ್ಮಸ್ಥಳ ಎಂಬುದು ಮಂಗಳೂರಿನಿಂದ ಸುಮಾರು ೩೮ ಮೈಲು ಪೂರ್ವಕ್ಕಿರುವ ಒಂದು ವನಪ್ರದೇಶ; ಕದ್ರಿಯಲ್ಲಿರುವಂತೆ ಇಲ್ಲಿ ಒಂದು ಶಿವಾಲಯವಿದೆ. ಆ ಶಿವನನ್ನು 'ಮಂಜುನಾಥ' ಎಂಬ ಹೆಸರಿನಿಂದಲೇ ಕರೆಯುತ್ತಾರೆ. ಈ ಕ್ಷೇತ್ರ ಮಂಜುನಾಥನಿಗೂ, ಸ್ಥಳಿಕ ದೇವತೆಯಾದ 'ಅಣ್ಣಪ್ಪ ಪಂಜುರ್ಲಿ'ಗೂ ಹೆಸರಾದೊಂದು ಸ್ಥಳ. ಇಲ್ಲಿಗೆ ಎಲ್ಲ ದಿನಗಳಲ್ಲೂ ಯಾತ್ರಿಕರು ಬರುತ್ತಲೇ ಇರುತ್ತಾರೆ. ಅವರೆಲ್ಲರನ್ನೂ ಅನ್ನ ವಸತಿ ಕೊಟ್ಟು ನೋಡಿಕೊಳ್ಳುವ ಏರ್ಪಾಟೂ ಇದೆ. ಮಲೆನಾಡಿನ ಜನ, ತಮಗುಂಟಾದ ಬೇನೆ, ಬವಣೆಗಳ ಪರಿಹಾರಕ್ಕೂ, ಇತರರಿಂದಾದ ಅನ್ಯಾಯ ನಿವಾರಣೆಗೂ, ವಾದ ವಿವಾದಗಳ ತೀರ್ಮಾನಕ್ಕೂ ಇಲ್ಲಿಗೆ ಹರಕೆ ಹೇಳಿಕೊಂಡು ಬರುತ್ತಾರೆ. ಹಾಗೆ ನಿತ್ಯವೂ ಬರುವ ಜನರು ನೂರಾರು. ಇಲ್ಲಿನ ಹಬ್ಬ ಹುಣ್ಣಿಮೆಗಳಿಗೆ ಬರುವ ಯಾತ್ರಿಕರು ಸಾವಿರಾರು.

ಸುಬ್ರಹ್ಮಣ್ಯ ಎಂಬುದು ಘಟ್ಟದ ಬುಡದಲ್ಲಿ ಇರುವ

ಇನ್ನೊಂದು ಕ್ಷೇತ್ರ. ಇದು ಶಿವನ ಮಗ ಸ್ಕಂದ ಇಲ್ಲವೇ ಸುಬ್ರಹ್ಮಣ್ಯನಿಗೆ ಹೆಸರಾದ ಒಂದು ಕ್ಷೇತ್ರ. ಇಲ್ಲಿನ ನೆರೆ ಕೆರೆಯ ಪ್ರಾಂತಗಳಿಂದಲೂ, ಇದೇ ಕರಾವಳಿಯಿಂದಲೂ ಅಸಂಖ್ಯ ಭಕ್ತರು ಸದಾ ಬಂದು ಹೋಗುತ್ತಾರೆ. ರೋಗ ರುಜೆಗಳಿಂದ ನೊಂದವರು, ಸಂತಾನವಿಲ್ಲದೆ ಮರುಗುವವರು ಇಲ್ಲಿನ ದೇವರಿಗೆ ಹರಕೆ ಹೇಳಿಕೊಳ್ಳುತ್ತಾರೆ. ಅವರೆಲ್ಲ ತಮ್ಮ ಇಷ್ಟಾರ್ಥ ನೆರವೇರಿದಾಗ ಈ ಸ್ಥಳಕ್ಕೆ ಬಂದು ಹೇಳಿಕೊಂಡ ಕಾಣಿಕೆ ಸಲ್ಲಿಸುತ್ತಾರೆ. ಇಲ್ಲಿಗೆ ತೀರ ಸಮೀಪದಲ್ಲಿ ಕುಮಾರ ಧಾರೆ ಎಂಬ ನದಿ ಹರಿಯುತ್ತದೆ. ಅದರ ದಂಡೆಯಲ್ಲಿ ಬೆಳೆದ ಒಂದು ಹುತ್ತವನ್ನು 'ಆದಿ ಸುಬ್ರಹ್ಮಣ್ಯ' ಎಂಬ ಹೆಸರಿನಿಂದ ಕರೆಯುತ್ತಾರೆ. ಹುತ್ತ ಸರ್ಪದ ಆವಾಸವಷ್ಟೆ. ಸರ್ಪವನ್ನೇ 'ಸುಬ್ಬರಾಯ' ಇಲ್ಲವೇ 'ಸುಬ್ರಹ್ಮಣ್ಯ'ನ ಸಂಕೇತವಾಗಿ ಜನ ನಂಬುತ್ತಾ ಬಂದಿದ್ದಾರೆ. ಮಕ್ಕಳಾಗದವರಿಗೆ ಸುಬ್ರಹ್ಮಣ್ಯ ಒಲಿದರೆ ಮಕ್ಕಳಾಗುತ್ತಾರೆಂದು ಜನಗಳಲ್ಲಿ ನಂಬಿಕೆಯಿದೆ. ಇಲ್ಲಿಗೆ ಹೇಳಿಕೊಳ್ಳುವ ಹರಕೆಗಳಲ್ಲಿ, ಬೆಳ್ಳಿ, ಚಿನ್ನಗಳಲ್ಲಿ ನಿರ್ಮಿಸಿದ ಸರ್ಪನ ಆಕೃತಿಗಳು ಮುಖ್ಯ ವಸ್ತುಗಳು. ಸುಬ್ರಹ್ಮಣ್ಯನಿಗೆ ಭಕ್ತರು ಹೇಳಿಕೊಳ್ಳುವ ಹರಕೆಗಳಲ್ಲಿ ಒಂದು ಕಠಿಣ ತೆರನ ಹರಕೆಯುಂಟು. ಅದು 'ಮಡಸ್ನಾನ' ಎಂಬ ಸಂಪ್ರದಾಯ. ಹರಕೆ ಹೊತ್ತವರು ಇಲ್ಲಿನ ನದಿಯಲ್ಲಿ ಮಿಂದು, 'ಆದಿ ಸುಬ್ರಹ್ಮಣ್ಯ' ಎಂಬ ಸ್ಥಳದಿಂದ ಒಂದು ಮೈಲು ದೂರವಿರುವ ಸುಬ್ರಹ್ಮಣ್ಯ ದೇವಾಲಯದ ತನಕವೂ ನೆಲದ ಮೇಲೆ ಹೊರಳಿಕೊಂಡೇ ಹೋಗುತ್ತಾರೆ. ಅನಂತರ ಅಲ್ಲಿ ಬ್ರಾಹ್ಮಣ ಸಂತರ್ಪಣೆ ಮುಗಿದ ಮೇಲೆ, ಉಳಿದ 'ಮಡೆಯ' ಮೇಲೆ ('ಮಡೆ' ಎಂದರೆ ಎಂಜಲನ್ನ) ಉರುಳಿಕೊಂಡು ತಮ್ಮ ಹರಕೆಯನ್ನು ಕೊನೆಗೊಳಿಸುತ್ತಾರೆ. ಈ ಜಿಲ್ಲೆಯ ಇನ್ನೊಂದೆರಡು ಸುಬ್ರಹ್ಮಣ್ಯ

ದೇವಾಲಯಗಳಲ್ಲೂ ಇಂಥ ಸಂಪ್ರದಾಯವು ಇಂದಿಗೂ ಉಳಿದು ಕೊಂಡಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು ಎಂಟನೆಯ ಶತಮಾನದ ಹೊತ್ತಿಗೆ ಜೈನ ಧರ್ಮ ಹಬ್ಬತೊಡಗಿತು. ಮುಂದೆ ಕೆಲವು ಶತಮಾನಗಳ ತನಕ ಇಲ್ಲಿನ ಹಲವು ಅರಸರು ಜೈನಮತಾವಲಂಬಿಗಳಾಗಿದ್ದರು. ಅಂಥ ದೊರೆಗಳಲ್ಲಿ ಒಬ್ಬಾತ ಕಾರ್ಕಳದ ದೊರೆಯಾಗಿದ್ದ. ಆತನ ಕಾಲಕ್ಕೆ ಕಾರ್ಕಳದ ಒಂದು ಉನ್ನತ ಬೆಟ್ಟದ ಮೇಲೆ ಬಾಹುಬಲಿಯ ದೈತ್ಯ ವಿಗ್ರಹವನ್ನು ಸ್ಥಾಪಿಸಿದ. ಶ್ರವಣಬೆಳಗೊಳದಲ್ಲಿ ೧೦ನೆಯ ಶತಮಾನದಲ್ಲಿ ಚಾವುಂಡರಾಯ ಸ್ಥಾಪಿಸಿದ ಗೊಮ್ಮಟಕ್ಕಿಂತ ಈ ವಿಗ್ರಹ ತುಸುವೇ ಕಿರಿದು-ಸುಮಾರು ೪೭ ಅಡಿ ಎತ್ತರದ್ದು. ಬೆಟ್ಟದ ಮೇಲೆ ನಿಂತ ಈ ವಿಗ್ರಹ ಬಲು ದೂರದವರೆಗೆ ಕಾಣಿಸುವಂತ ಒಂದು ಭವ್ಯ ನೋಟ. ಉತ್ತರ ಹಿಂದುಸ್ತಾನದಿಂದಲೂ ಇಲ್ಲಿಗೆ ಜೈನ ಯಾತ್ರಿಗಳು ಸದಾ ಬರುತ್ತಿರುತ್ತಾರೆ.

ಕಾರ್ಕಳಕ್ಕೆ ೧೦-೧೨ ಮೈಲು ದಕ್ಷಿಣದಲ್ಲಿರುವ ಮೂಡಬಿದಿರೆ ಜೈನ ಧರ್ಮೀಯರ ಪಾಲಿಗೆ ಇನ್ನೊಂದು ಮಹಾ ಕ್ಷೇತ್ರ. ಇಲ್ಲಿ ಹಲವಾರು ಬಸದಿಗಳಿವೆ. ಅವುಗಳಲ್ಲಿ ಸಾವಿರ ಕಂಬದ ಬಸದಿ ಎಂಬ ಒಂದು ಬಸದಿ ತನ್ನ ಗಾತ್ರದಲ್ಲಿ ಮತ್ತು ರಚನೆಯಲ್ಲಿ ಎಷ್ಟು ದೊಡ್ಡದೋ ಅಷ್ಟೇ ಆಕರ್ಷಕವಾದದ್ದೂ ಹೌದು. ಇದರ ಸಭಾಮಂಟಪ ವಿವಿಧ ತೆರನ ಆಕೃತಿಯ ಹೆಗ್ಗಂಬಗಳ ಮೇಲೆ ನಿರ್ಮಿಸಿದೊಂದು ರಚನೆ. ಅದಕ್ಕೆ ತಗಲಿಕೊಂಡ ಜಿನಾಲಯವೂ ಅಷ್ಟೊಂದು ವಿಶಾಲವೂ ಉನ್ನತವೂ ಆದದ್ದು. ಅದರ ಮಾಡಿನ ಸಜ್ಜೆಯನ್ನು ಆನಿಸಿ ನಿಂತ ಹಲವಾರು ಮರದ ಶಿಲ್ಪಗಳು ಬಲು ಮೋಹಕವಾದ ಕೆತ್ತನೆಗಳು. ಈ ಸ್ಥಳವು ಜೈನರ ಪಾಲಿಗೆ ತುಂಬ

ಪ್ರಸಿದ್ಧ ಕ್ಷೇತ್ರ. ಇಲ್ಲಿನ ಪುರಾತನ ಪುಸ್ತಕಾಲಯದಲ್ಲಿ ಅತ್ಯಂತ ಅಪೂರ್ವದ ಧರ್ಮಗ್ರಂಥಗಳು ಹಲವಾರಿವೆ. ಒಂದು ಕಾಲದಲ್ಲಿ ಇದು ಮಹಾ ಮಹಾ ಪಂಡಿತರ ಬೀಡೂ ಆಗಿತ್ತು.

ಮೂಡಬಿದಿರೆಯಿಂದ ೧೨ ಮೈಲು ದೂರಕ್ಕೆ ವೇಣೂರು ಎಂಬ ನದೀ ತೀರದ ಪಟ್ಟಣವಿದೆ. ಇದೂ ಜೈನ ಪ್ರಸಿದ್ಧಿಯ ಕ್ಷೇತ್ರ. ಇಲ್ಲಿಯೂ ಹಲವಾರು ಬಸದಿಗಳಿವೆ. ಅದಲ್ಲದೆ ಒಂದು ವಿಶಾಲ ಪ್ರಾಕಾರದೊಳಗೆ ಉನ್ನತ ಪೀಠದ ಮೇಲೆ ನಿಲ್ಲಿಸಿದ ಸುಮಾರು ೩೫ ಅಡಿ ಗಾತ್ರದ ಗೊಮ್ಮಟ ವಿಗ್ರಹವೂ ಯಾತ್ರಿಕರನ್ನು ಆಕರ್ಷಿಸುತ್ತದೆ. ಇಲ್ಲಿನ ಮತ್ತು ಕಾರ್ಕಳದ ಗೊಮ್ಮಟ ವಿಗ್ರಹಗಳನ್ನು ಸುಮಾರು ಎರಡು ಶತಮಾನಗಳ ಅಂತರದಲ್ಲಿ ಕಡೆದು ನಿಲ್ಲಿಸಿದರಾದರೂ, ಸ್ಥಳೀಯ ದೈವಾರಾಧನೆಯ ಕಥೆಗಳಲ್ಲಿ, ಅವನ್ನು ಕಡೆದಾತ ಒಬ್ಬನೇ ಎಂಬ ನಂಬಿಕೆಯಿದೆ. ಆತನೂ, ಆತನ ಒಬ್ಬಳು ತಂಗಿಯೂ 'ಕಲ್ಕುಡ' ಮತ್ತು 'ಕಲ್ಲುರ್ಟಿ' ಎಂಬ ಭೂತಗಳ ಹೆಸರಿನಲ್ಲಿ ಪ್ರಸಿದ್ಧರಾಗಿದ್ದಾರೆ. ಊರ ಜನ ಈ ಎರಡು ದೈವಗಳನ್ನು ನಂಬಿ ಪೂಜಿಸುವ ಸಂಪ್ರದಾಯ ಈ ತನಕ ಉಳಿದುಕೊಂಡಿದೆ.

ಪಶ್ಚಿಮ ಕರಾವಳಿಯ ಅತಿ ದೊಡ್ಡ ನಗರವೆಂದರೆ ಮಂಗಳೂರು. ಅದು ನೇತ್ರಾವತಿ ನದಿ ದಂಡೆಯ ಮೇಲೆ ಬೆಳೆದುಕೊಂಡ ಒಂದು ಪಟ್ಟಣ. ಈ ಪಟ್ಟಣದ ನೆಲ ಸಮತಟ್ಟಾಗಿದ್ದಷ್ಟೇ ಗುಡ್ಡಗಳಿಂದಲೂ ತುಂಬಿಕೊಂಡಿದೆ. ಸಮತಟ್ಟಾದ ಭಾಗಗಳಲ್ಲಿ ಹೊಲ ಗದ್ದೆಗಳು, ತೆಂಗಿನ ತೋಟಗಳು ಸಮೃದ್ಧವಾಗಿರುವಂತೆ ಜನವಸತಿಗಳೂ ಸಮೃದ್ಧವಾಗಿವೆ. ನೇತ್ರಾವತಿ ನದಿಯು ಅಳಿವೆ ನಗರದ ಒಂದು ಮಗ್ಗುಲಿಗಿದೆ. ಇದರಿಂದಾಗಿ ಬಲು ಹಿಂದಿನಿಂದಲೂ ಹಾಯಿ ಹಡಗುಗಳು

ಇಲ್ಲಿಗೆ ಬಂದು ಹೋಗುತ್ತಿದ್ದುವು. ಅದರಿಂದ ವಿದೇಶಗಳೊಡನೆ ವ್ಯಾಪಾರ ಸಂಪರ್ಕ ಬೆಳೆಯಿತು. ಅಲ್ಲದೆ ಇದು ಜಿಲ್ಲೆಯ ಮುಖ್ಯ ಪಟ್ಟಣವಾದುದರಿಂದ ಕೋರ್ಟುಗಳು, ಕಛೇರಿಗಳು ಹೆಚ್ಚುತ್ತ ಬಂದುವು. ವ್ಯಾಪಾರದ ಚಟುವಟಿಕೆ ಬೆಳೆದು ಬಂದಂತೆ ಜನಸಂಖ್ಯೆಯೂ ಬೆಳೆಯ ತೊಡಗಿತು. ಅನಂತರ ವಿದೇಶೀಯ ಕ್ರೈಸ್ತ ಮಿಷನರಿಗಳು ಈ ಠಾವನ್ನು ತಮ್ಮ ಚಟುವಟಿಕೆಗಳ ಕೇಂದ್ರವನ್ನಾಗಿ ಮಾಡಿಕೊಂಡುದರ ಫಲವಾಗಿ ಕ್ರೈಸ್ತ ದೇವಾಲಯಗಳು ಹಲವಾರು ಕಾಣಿಸಿಕೊಂಡವು. ಅದರಿಂದಾಗಿ ವಿದ್ಯಾಸಂಸ್ಥೆಗಳು ಹುಟ್ಟಿಕೊಂಡವು. ಈ ಮೊದಲಿಲ್ಲದ ಅನೇಕ ಉದ್ಯಮಗಳು ತೊಡಗಿದವು. ನೇಯ್ಗೆಯ ಕಾರ್ಖಾನೆಗಳು, ಹಂಚಿನ ಕಾರ್ಖಾನೆಗಳು, ಕಬ್ಬಿಣ ಎರೆಯುವ ಕಾರ್ಖಾನೆಗಳು ಕಳೆದ ಶತಮಾನದಲ್ಲಿ ಸ್ಥಾಪನೆಗೊಂಡವು. ಈ ಪ್ರದೇಶಕ್ಕೆ ಹಂಚಿನ ಕಾರ್ಖಾನೆಗೆ ಬೇಕಾದ ಆವೆಮಣ್ಣು ಮತ್ತು ಕಟ್ಟಿಗೆ ದೋಣಿಗಳ ಮೂಲಕ ಬರುವುದಕ್ಕೆ ಹೆಚ್ಚಿನ ಅನುಕೂಲತೆ ಇದೆ. ನೇತ್ರಾವತಿ ನದಿಯಲ್ಲಿ ೧೫-೧೬ ಮೈಲುಗಳ ದೂರದ ತನಕವೂ ದೋಣಿಗಳ ಓಡಾಟ ಧಾರಾಳ.

ಈ ನದಿ ಕಡಲಿನೊಡನೆ ಕೂಡುವಲ್ಲಿ ಗುರುಪುರ ಹೊಳೆ ಎಂಬ ಇನ್ನೊಂದು ಹೊಳೆಯೂ ಹರಿದು ಬಂದು ಸೇರಿಕೊಳ್ಳುವುದರಿಂದ, ದೋಣಿಗಳ ಓಡಾಟಕ್ಕೆ, ಅಗ್ಗವಾಗಿ ಕಟ್ಟಿಗೆ, ಆವೆ ಮಣ್ಣುಗಳನ್ನು ತರುವುದಕ್ಕೆ ಇನ್ನಷ್ಟು ಅನುಕೂಲವಾಗಿದೆ. ಇಲ್ಲಿ ತಯಾರಾಗುತ್ತಿದ್ದ ಹಂಚಿನ ಉದ್ಯಮ ಮೊದಲು ವಿದೇಶೀಯರಿಂದ ತೊಡಗಿತಾದರೂ, ಹಂಚಿಗೆ ಸಿಂಹಳದಿಂದ ಮುಂಬಯಿಯ ತನಕ ಗಿರಾಕಿಗಳು ಬಲಿತುದರಿಂದ, ಅನೇಕ ಸ್ಥಳೀಯ ಶ್ರೀಮಂತರು ಹಂಚಿನ ಕಾರ್ಖಾನೆಗಳನ್ನು ತೆರೆಯತೊಡಗಿದರು. ಇಂದು ಇಂಥ



ಮಂಗಳೂರಿನ ಸೈಂಟ್ ಎಲೋಸಿಯಸ್ ಕಾಲೇಜ್

ಕಾರ್ಖಾನೆಗಳ ಸಂಖ್ಯೆ ೨೦–೩೦ಕ್ಕೇರಿದೆ. ಇದರಿಂದಾಗಿ ಸಾವಿರಾರು ಹಳ್ಳಿಯ ಜನ ಆಕರ್ಷಿತರಾಗಿ ಇಲ್ಲಿಯ ಕಾರ್ಖಾನೆಗಳಿಗೆ ಬಂದು ದುಡಿಯತೊಡಗಿದರು. ಇದು ರೇವಾದುದರಿಂದ ಅನೇಕ ತೆರನ ಕಚ್ಚಾವಸ್ತುಗಳನ್ನು ಪರದೇಶಕ್ಕೆ ರವಾನಿಸುವ ಸೌಕರ್ಯ ಇದ್ದೇ ಇತ್ತು. ಅಂಥವುಗಳಲ್ಲಿ ಸಹ್ಯಾದ್ರಿ ಪರ್ವತ ಪ್ರದೇಶದಲ್ಲಿ ಬೆಳೆಯುತ್ತಿದ್ದ ಕಾಫಿ ಒಂದು. ಈ ಕಾಫಿಯನ್ನು ಶುಚೀಕರಿಸಿ ಯೂರೋಪಿಗೆ ಕಳುಹಿಸುವ ಕಾರ್ಖಾನೆಗಳು ಹುಟ್ಟಿಕೊಂಡುವು. ಅದರಂತೆ ನಾಡಿನಲ್ಲೇ ಉತ್ಪನ್ನವಾಗುತ್ತಿದ್ದ ಗೇರುಬೀಜಕ್ಕೆ ಯೂರೋಪು, ಅಮೇರಿಕಗಳ ಗಿರಾಕಿ ಬರತೊಡಗಿದಂತೆ, ಅವುಗಳ ಶುಚೀಕರಣದ ಬಗ್ಗೆಯೂ ಕಾರ್ಖಾನೆಗಳು ಹುಟ್ಟಿಕೊಂಡುವು. ಗೇರುಬೀಜವನ್ನು ಸುಟ್ಟು, ಓಡಿನಿಂದ ಬೀಜವನ್ನು ಪ್ರತ್ಯೇಕಿಸುವ ಮತ್ತು ಅದರ ಓಡಿನಿಂದ ಎಣ್ಣೆಯನ್ನು ತೆಗೆಯುವ ಉದ್ಯಮವೊಂದರಲ್ಲೇ ಇವತ್ತು ೨೦ ಸಾವಿರ ಜನ ದುಡಿಯುತ್ತಿದ್ದಾರೆ. ಇಂಥ ಉದ್ಯಮಗಳ ಜತೆಯಲ್ಲಿ ಇಂದು ಹಲವಾರು ಹೊಸಹೊಸ ಉದ್ಯಮಗಳು ಸೇರಿಕೊಳ್ಳುತ್ತಲೇ ಬಂದಿವೆ.

ಇಲ್ಲಿನ ಶಿಕ್ಷಣ ಸಂಸ್ಥೆಗಳ ಸಂಖ್ಯೆಯೂ ಬೆಳೆಯಿತು ; ಶ್ರಮಗಾರರ ಸಂಖ್ಯೆಯೂ ಬೆಳೆಯಿತು. ವ್ಯಾಪಾರೋದ್ಯಮಗಳ ಸಂಖ್ಯೆಯೂ ಬೆಳೆಯಿತು. ಹಣಕಾಸಿನ ವ್ಯವಹಾರಕ್ಕೆ ಸಂಬಂಧಪಟ್ಟಂತೆ ಬ್ಯಾಂಕಿಂಗ್ ಉದ್ಯಮ ಬಹಳ ಮುಂದಕ್ಕೆ ಬಂದಿತು. ದಕ್ಷಿಣ ಕನ್ನಡ ಜಿಲ್ಲೆಯೊಂದರಲ್ಲೇ ಹುಟ್ಟಿಕೊಂಡು, ಮುಂದೆ ಭಾರತದ ಉದ್ದಗಲಕ್ಕೂ ವಿಸ್ತರಿಸಿದ ಮೂರು ನಾಲ್ಕು ಬ್ಯಾಂಕಿಂಗ್ ಸಂಸ್ಥೆಗಳು ಇಂದು ಭಾರತದಲ್ಲೇ ಪ್ರಸಿದ್ಧವೆನಿಸಿವೆ.

ಈ ಹಲವಾರು ಕಾರಣಗಳಿಂದ ನಗರಕ್ಕೆ ಬಂದುಹೋಗುವ

ಜನಸಂಖ್ಯೆ ವಿಪರೀತವಾಗತೊಡಗಿತು. ಬಂದು ಹೋಗುವ ಸಾಮಾನು, ಸಾಮಗ್ರಿಗಳೂ ಹೆಚ್ಚತೊಡಗಿದವು. ಜನಗಳ ಸಲುವಾಗಿ ಅನ್ನಾಹಾರವನ್ನು, ವಸತಿ ಸೌಕರ್ಯವನ್ನು ಒದಗಿಸಲಿಕ್ಕೆ ಅನೇಕ ದೊಡ್ಡ ಹೋಟೆಲುಗಳು ಬೆಳೆಯಲೇಬೇಕಾಯಿತು.

ಯಾವುದೇ ನಗರ ಬೆಳೆಯುವುದಕ್ಕೆ ಸಾರಿಗೆ ಸಂಪರ್ಕ ಬಲು ಮುಖ್ಯವಾದ ಅಂಗ. ಕಳೆದ ಶತಮಾನದಲ್ಲಿ ಈ ನಗರಕ್ಕೆ ಬಂದು ಹೋಗುವ ದಾರಿಗಳೆಲ್ಲವೂ ಗಾಡಿ ದಾರಿಗಳಾಗಿದ್ದುವು. ಪ್ರತಿಯೊಂದು ದಾರಿಯು ಅಡ್ಡಕ್ಕೂ ಒಂದಲ್ಲ ಒಂದು ಹೊಳೆ ಅಡ್ಡವಾಗಿತ್ತು. ಕರಾವಳಿಯಲ್ಲಿ, ಮಂಗಳೂರಿನಿಂದ ಜಿಲ್ಲೆಯ ತುದಿಗೆ ಹೋಗಬೇಕಾದರೆ, ಎಂಟೋ ಹತ್ತೋ ಹೊಳೆಗಳನ್ನು ದಾಟಬೇಕಿತ್ತು. ಒಳನಾಡಿನ ಪ್ರಯಾಣದಲ್ಲೂ ಅಲ್ಲಲ್ಲಿ ಹೊಳೆಗಳು ಅಡ್ಡ ಬರುತ್ತಿದ್ದುವು. ಅವುಗಳಿಗೆ ಸೇತುವೆಯ ನಿರ್ಮಾಣದ ಕೆಲಸ ಅನಿವಾರ್ಯವಾಯಿತು. ಈ ನಗರದ ವ್ಯಾಪಾರ ಬೆಳೆಯುವುದಕ್ಕೆ ಮೂಲಕಾರಣವಾದದ್ದು ಸಮುದ್ರ ಸಂಪರ್ಕ, ಹಡಗಿನ ಸಾರಿಗೆ. ಇಲ್ಲಿಗೆ ವಿದೇಶಗಳಿಂದಲೂ ಉಗಿ ಹಡಗುಗಳ ಮೂಲಕ ಆಮದು ರಫ್ತುಗಳ ಕಾರ್ಯ ನಡೆಯುತ್ತಿತ್ತು. ಆದರೆ ದೊಡ್ಡ ಉಗಿಹಡಗುಗಳು ರೇವಿನಿಂದ ಮೂರು ಮೈಲು ದೂರಕ್ಕೆ ಸಮುದ್ರದಲ್ಲಿ ನಿಲ್ಲಬೇಕು. ದಡದಿಂದ ಮಚ್ವೆಗಳ ಮೂಲಕ ಸರಕನ್ನು ಕೊಂಡೊಯ್ದು, ಅವಕ್ಕೆ ತುಂಬಿಸಬೇಕು: ಅವು ಇಳಿಸುವ ಸರಕನ್ನು ದಡಕ್ಕೆ ಅಂಥ ಮಚ್ವೆಗಳೇ ತರಬೇಕು. ಮಳೆಗಾಲದ ನಾಲ್ಕೈದು ತಿಂಗಳುಗಳಲ್ಲಿ ದೇಶೀಯ ಹಡಗುಗಳು ಸಮುದ್ರಕ್ಕೆ ಹೋಗುವಂತಿಲ್ಲ. ಉಳಿದ ತಿಂಗಳುಗಳಲ್ಲಷ್ಟೇ ಅವುಗಳ ಸಂಚಾರ.

ಈ ಜಿಲ್ಲೆಗೆ ಪ್ರಯೋಜನಕಾರಿಯಾದ ರೈಲು ಸಂಪರ್ಕ

ಒಂದೇ ಒಂದಿತ್ತು. ಅದು ಮಂಗಳೂರಿನಿಂದ ದಕ್ಷಿಣಕ್ಕಿರುವ ಕೇರಳಕ್ಕೂ, ಅಲ್ಲಿಂದ ದೂರದ ಮದ್ರಾಸಿಗೆ ಹೋಗುವ ರೈಲು ದಾರಿ. ಜಿಲ್ಲೆಯ ಹಿನ್ನಾಡಾದ ಮೈಸೂರಿನಿಂದ ಸರಕು ತರಲು ಅದರ ಪ್ರಯೋಜನವೇ ಇರಲಿಲ್ಲ.

ಈ ಶತಮಾನದ ಆರಂಭದ ೫೦ ವರ್ಷಗಳೊಳಗಾಗಿ ಈ ಜಿಲ್ಲೆಯಲ್ಲೂ, ಹೊರಗೂ ಸಾರಿಗೆಯ ವಿಧಾನದಲ್ಲಿ ವಿಶೇಷ ಮಾರ್ಪಾಟು ಉಂಟಾಯಿತು. ಈ ಶತಮಾನದ ಎರಡು ದಶಕಗಳೊಳಗಾಗಿ ಎತ್ತಿನ ಬಂಡಿಗಳ ಯುಗ ಕಳೆದು, ಮೋಟಾರು ವಾಹನಗಳ ಯುಗ ತೊಡಗಿತು. ನದಿಗಳೆಲ್ಲವಕ್ಕೂ ಅಲ್ಲಲ್ಲಿ ಸೇತುವೆಗಳು ನಿರ್ಮಾಣಗೊಂಡವು. ಮುಂಬಯಿಯಂಥ ದೂರದ ಪಟ್ಟಣಗಳಿಂದ ಸರಕು ಸಾಮಗ್ರಿಗಳು ಮೋಟಾರು ಲಾರಿಗಳ ಮೂಲಕ ಬರತೊಡಗಿದವು. ಅದೇ ರೀತಿಯಲ್ಲಿ ಕೊಡಗು, ಮೈಸೂರು, ಧಾರವಾಡ ಪ್ರದೇಶಗಳಿಗೆ ನೇರಾದ ಸಾರಿಗೆ ಸಂಪರ್ಕ ಏರ್ಪಟ್ಟಿತು. ಈ ಹೊತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಎತ್ತಿನ ಬಂಡಿಯಲ್ಲಿ ಸರಕನ್ನು ತುಂಬಿ ಒಯ್ಯುವ ನೋಟ ಅಪೂರ್ವವಾಗಿದೆ. ರೈಲಿಗಿಂತ ಹೆಚ್ಚಾಗಿ ಇಲ್ಲಿನ ಪ್ರಯಾಣಿಕರು ಮೋಟಾರು ವಾಹನದ ಮೇಲೆ ಬೆಂಗಳೂರು, ಧಾರವಾಡ, ಮುಂಬಯಿಯಂಥ ನಗರಗಳಿಗೆ ಹೋಗಿ ಬರುತ್ತಿದ್ದಾರೆ.

೧೦–೧೫ ವರ್ಷಗಳಿಂದೀಚೆಗೆ ಇಲ್ಲಿಗೆ ಬಂದು ಹೋಗುವ ಜನಗಳಲ್ಲಿ ಅವಸರವುಳ್ಳವರೂ, ಶ್ರೀಮಂತರೂ ಹೆಚ್ಚುತ್ತ ಬಂದು ಮುಂಬಯಿ ಮಂಗಳೂರಿಗೆ ವಿಮಾನ ಸಂಪರ್ಕ ಕಲ್ಪಿತವಾಯಿತು. ಇಪ್ಪತ್ತನಾಲ್ಕು ತಾಸಿನಲ್ಲಿ ಮುಂಬಯಿಯಂಥ ದೂರದ ಪಟ್ಟಣಗಳಿಗೆ ಮೋಟಾರು ವಾಹನಗಳು ಪ್ರಯಾಣಿಕರನ್ನು ಒಯ್ಯುತ್ತವೆ. ಆದರ ವೇಗ ಸಾಲದವರಿಗೆ–

ಒಂದೆರಡು ತಾಸುಗಳಲ್ಲಿ ಅವರನ್ನು ಒಯ್ಯಬಲ್ಲ ವಿಮಾನ ಸಂಚಾರವೂ ಸೇರಿಕೊಂಡಿತು.

ಕನ್ನಡ ನಾಡಿನ ಕರಾವಳಿಯಲ್ಲಿ ವ್ಯಾಪಾರೋದ್ಯಮ ಬೆಳೆದಂತೆ ರೇವುಗಳ ಸೌಕರ್ಯ ಬೆಳೆಯಲೇ ಬೇಕಾಯಿತು. ಇದರಿಂದ ವಿದೇಶ ವ್ಯಾಪಾರ ಮತ್ತಷ್ಟು ಸುಲಭವಾಗುತ್ತದೆ. ಹಾಗೆ ವಿದೇಶಕ್ಕೆ ಕಳಿಸಬಲ್ಲ ಸರಕು ನಮ್ಮಲ್ಲೇನಿದೆ—ಎಂದು ನಿಮಗನಿಸಬಹುದು. ಈ ಕರಾವಳಿಯ ಹಿನ್ನಾಡಿನಲ್ಲಿ ಮತ್ತು ಪಶ್ಚಿಮ ಘಟ್ಟದಲ್ಲಿ ಕಬ್ಬಿಣದ ಅದುರು, ಮ್ಯಾಂಗನೀಸ್ ಅದುರು ಧಾರಾಳವಾಗಿ ಸಿಗುತ್ತವೆ. ಇವಕ್ಕೆ ಜಪಾನ್, ಯೂರೋಪು ಮೊದಲಾದ ದೇಶಗಳೆಲ್ಲ ಗಿರಾಕಿಗಳು. ಅಂಥ ಅದುರನ್ನು ಸುಲಭದಲ್ಲಿ ಹಡಗುಗಳಿಗೆ ತುಂಬಿಸಬೇಕಾದರೆ ಆ ಹಡಗುಗಳು ಕಡಲ ದಂಡೆಗೆ ತಾಗಿ ನಿಲ್ಲಬೇಕು. ಆ ಬಗೆಯ ಸೌಕರ್ಯ ಈ ತನಕ ಇದ್ದಿರಲಿಲ್ಲ. ಕನ್ನಡ ನಾಡಿನ ಖನಿಜದ ಅದುರುಗಳು ವಿದೇಶಕ್ಕೆ ರಫ್ತಾಗಲು ಕಾರವಾರ, ಅಂಕೋಲ, ಗಂಗೊಳ್ಳಿ, ಮಂಗಳೂರು ಬಂದರುಗಳಿಗೆ ಬರುತ್ತವೆ. ಇಲ್ಲೆಲ್ಲೂ ಭಾರಿ ಹಡಗುಗಳು ನೆಲದ ದಂಡೆಗೆ ತಾಗಿ ನಿಲ್ಲುವ ಸೌಕರ್ಯವಿದ್ದಿರಲಿಲ್ಲ. ಅಂಥ ಸೌಕರ್ಯವನ್ನು ಕಲ್ಪಿಸಬೇಕಾದ ಅನಿವಾರ್ಯ ಬಂದೊದಗಿತು.

ಕಾರವಾರದ ರೇವು ಆ ದೃಷ್ಟಿಯಿಂದ ಒಳ್ಳೆಯ ರೇವಾಗಿ ಬೆಳೆಯಬಹುದು. ಕಡಲಲ್ಲಿ ಚಾಚಿಕೊಂಡ ಗುಡ್ಡಗಳ ರಕ್ಷಣೆ ಆ ರೇವಿಗಿದೆ. ಅದೇ ರೀತಿ ಮಲ್ಪೆಯೂ ಬೆಳೆಯಬಹುದಾದ ಇನ್ನೊಂದು ರೇವು. ಇದು ಉಡುಪಿಯ ಪಶ್ಚಿಮಕ್ಕಿರುವ ರೇವು. ಮಂಗಳೂರಿನ ವೇಗದ ಬೆಳವಣಿಗೆಯಿಂದಾಗಿ-ಅಲ್ಲೊಂದು ರೇವನ್ನು, ಈ ನಗರದ ಎಂಟು ಮೈಲು ಉತ್ತರದಲ್ಲಿ ನಿರ್ಮಿಸತೊಡಗಿದ್ದಾರೆ. ಇದೊಂದು ಕೃತಕ ರೇವು. ಪಣಂಬೂರು ಎಂಬ ಸಮತಟ್ಟಾದ ಕಡಲ ತೀರದ ಪ್ರದೇಶ

ದಲ್ಲಿ ದೊಡ್ಡ ದೊಡ್ಡ ಹಡಗುಗಳು ಕಡಲಿಂದ ಒಳಕ್ಕೆ ಬರುವುದಕ್ಕೆ ಬೇಕಾದ ಕಾಲುವೆಯನ್ನು ಅಗೆದು, ಆ ಹಡಗುಗಳು ತಂಗಲು ಅನುಕೂಲವಾದಂಥ ಆಗಾದ ಕೆರೆಯೊಂದನ್ನು ನಿರ್ಮಿಸಿದ್ದಾರೆ. ಇಂಥ ತಾವುಗಳನ್ನು 'ನೌಕಾಶ್ರಯ' ಎಂದು ಕರೆಯುತ್ತಾರೆ. ಈಗಾಗಲೇ ಇಲ್ಲಿನ ನೌಕಾಶ್ರಯದಲ್ಲಿ ಅದುರುಗಳನ್ನೊಯಲು ಭಾರಿ ಹಡಗುಗಳು ಬರತೊಡಗಿವೆ. ಈ ರೇವಿನ ಸುತ್ತುಮುತ್ತು ಹೊಸ ಹೊಸ ಕಾರ್ಖಾನೆಗಳೂ ಹುಟುತ್ತಿವೆ. ಈ ರೇವನ್ನು ಹಿನ್ನಾಡಿನ ಹಾಸನ ಎಂಬಲ್ಲಿಯ ತನಕ ರೈಲು ಹಾದಿಯಿಂದ ಜೋಡಿಸುವ ಕೆಲಸ ನಡೆಯುತ್ತಿದೆ. ಇದಕ್ಕೀಗ ನವಮಂಗಳೂರು ಎಂಬ ಹೆಸರನ್ನು ಕೊಟ್ಟಿದ್ದಾರೆ.

೪

ಈ ತನಕವೂ ನಾನು ಹೇಳದಿರುವ ಕರಾವಳಿಯ ಸಂಪತ್ತನ್ನು ಕುರಿತು ಈಗ ಹೇಳಬಹುದು. ಅದೆಂದರೆ ಮೀನುಗಾರಿಕೆ. ಮೊನ್ನೆ ಮೊನ್ನೆಯ ತನಕವೂ ಕರಾವಳಿಯ ಬೆಸ್ತರು ಮಳೆಗಾಲ ಕಳೆದ ಬಳಿಕ, ಬೇಸಗೆ ಮುಗಿಯುವ ತನಕ, ದೊಡ್ಡ ದೊಡ್ಡ ದೋಣಿಗಳಲ್ಲಿ ಕುಳಿತು ಸಮುದ್ರದೊಳಗೆ ಒಂದೆರಡು ಮೈಲುದೂರ ಸಂಚರಿಸಿ ಮೀನನ್ನು ಹಿಡಿದು ತರುತ್ತಿದ್ದರು. ಸಾವಿರಾರು ಜನರು ಈ ಉದ್ಯಮದಿಂದ ಜೀವಿಸುತ್ತಿದ್ದಾರೆ. ರಸ್ತೆ ಸಾರಿಗೆಯಲ್ಲಿ ಎತ್ತಿನ ಬಂಡಿ ಎಷ್ಟು ಹಳೆಯದೋ, ಅಷ್ಟೇ ಮೆಲ್ಲಗಿನ ಹಳೆಯ ರೀತಿ ಇಲ್ಲಿನ ಮೀನುಗಾರಿಕೆಯಾಗಿತ್ತು.

ಇಂದು ಆ ಪರಿಸ್ಥಿತಿ ಬದಲಿಸುತ್ತ ಬಂದಿದೆ. ಕಾರವಾರದಿಂದ ಮಂಗಳೂರಿನ ತನಕ ಇಂದು ಯಾಂತ್ರಿಕ ದೋಣಿಗಳ ಸಹಾಯದಿಂದ ನಮ್ಮ ಬೆಸ್ತರು ಸಮುದ್ರದೊಳಕ್ಕೆ ಬಹಳ ದೂರದ ತನಕವೂ ಸಂಚರಿಸಿ ; ಬಲೆಬೀಸಿ ಮೀನನ್ನು ಹಿಡಿದು

ತರುತ್ತಿದ್ದಾರೆ. ಹಾಗೆ ತಂದ ಮೀನನ್ನು ಒಣಗಿಸಿ ಗಿರಾಕಿಗೆ ಮುಟ್ಟಿಸಬೇಕಾಗುತ್ತದೆ. ಇಲ್ಲವಾದರೆ ಅದು ಕೊಳೆಯುತ್ತದೆ. ಹಿಂದಿನವರು ಹಿಡಿದು ತಂದ ಮೀನಿಗೆ ಉಪ್ಪುಹಾಕಿ ಅದನ್ನು ಒಣಗಿಸಿ ಅನಂತರ ಮಾರುತ್ತಿದ್ದರು. ತಿನ್ನಲು ಬಾರದ ಮೀನಿನ ಜಾತಿಯನ್ನು ಮೀನುಗೊಬ್ಬರವಾಗಿ ಪರಿವರ್ತಿಸುತ್ತಿದ್ದರು. ಸಿಗಡಿ (ಚಟ್ಲಿ)ಯಂತಹ ಜಲಚರಗಳನ್ನು ಹೆಚ್ಚು ಹೊತ್ತು ಇಡು ವಂತಿಲ್ಲ. ಅಲ್ಲದೆ, ಒಮ್ಮೆಗೇ ಹೆಚ್ಚು ಮೀನು ಬಲೆಗೆ ಬಿದ್ದಾಗ ಅಷ್ಟನ್ನು ಒಣಗಿಸುವುದೂ ಕಷ್ಟ. ಇಂದು ಅಂಥ ಪರಿಸ್ಥಿತಿಯು ಬದಲಿಸಿದೆ. ಕಡಲ ತೀರದ ಉದ್ದಕ್ಕೂ ಅಲ್ಲಲ್ಲಿ ಐಸ್ ಕಾರ್ಖಾನೆ ಗಳಿವೆ. ಶೀತದಿಂದ ನೀರನ್ನು ಗಟ್ಟಿಗಟ್ಟಿಸಲು ಬರುತ್ತದೆ. ಶೀತ ಕಾರಿ ವಾಹನಗಳಲ್ಲಿ ಮೀನನ್ನು ದೂರದ ಊರುಗಳಿಗೆ ಸಾಗಿಸಿ ಮಾರಲು ಬರುತ್ತದೆ. ಮೀನು, ಸಿಗಡಿ ಮೊದಲಾದುವನ್ನು ಗಾಳಿಯ ಸಂಪರ್ಕವಿಲ್ಲದೆಯೇ, ಡಬ್ಬಿಗಳಲ್ಲಿ ತುಂಬಿಸಿ ಬೆಸೆದಿಟ್ಟರೆ, ಆ ಮೀನನ್ನು ಎಷ್ಟೋ ಸಮಯದ ಬಳಿಕವೂ ಉಪಯೋಗಿಸ ಬಹುದು. ಇಂತಹ ಸೌಕರ್ಯಗಳ ದೆಸೆಯಿಂದ ನಮ್ಮ ಕರಾ ವಳಿಯ ಸಿಗಡಿ, ಮೀನು, ಮೊದಲಾದುವು ಜಪಾನು, ಅಮೇ ರಿಕಗಳಂತಹ ದೂರದ ದೇಶಗಳಿಗೂ ರಫ್ತಾಗುತ್ತಿವೆ. ಮೊದಲಿನ ಕಾಲಕ್ಕೆ, ಇಲ್ಲಿನ ಕಡಲಿನ ಮೀನು ೫೦–೧೦೦ ಮೈಲು ಅಂತರ ದಲ್ಲಿ ವಾಸಿಸುತ್ತಿರುವ ಜನಗಳ ಹೊಟ್ಟೆಯನ್ನು ತಣಿಸಿದರೆ, ಇಂದು ಅದು ೧೦–೧೨ ಸಾವಿರ ಮೈಲು ದೂರದ ಜನಗಳ ಹೊಟ್ಟೆಯನ್ನೂ ತಣಿಸಬಹುದು. ಹೀಗಾಗಿ ನಮ್ಮ ಕರಾವಳಿ ಎಂಬುದು ಸಮುದ್ರ ರಾಜನ ಕೃಪೆಯಿಂದ ನಮಗೆ ಅತ್ಯಂತ ದೂರದ ದೇಶಗಳನ್ನು ಬೇಕಷ್ಟು ಹತ್ತಿರ ತಂದುಕೊಟ್ಟಿದೆ. ನಮ್ಮ ಅವರ ವ್ಯಾಪಾರ–ಊರು ಮನೆಗಳಲ್ಲಿ ಮಾಡುವ ವ್ಯಾಪಾರ ದಷ್ಟು ಸಲೀಸಾಗಿದೆ.

ಕರ್ನಾಟಕದ ಕರಾವಳಿಯನ್ನು ಕುರಿತು ಈ ತನಕ ನಾನು ಬಣ್ಣಿಸಿರುವ ಸಂಪತ್ತು ಎಷ್ಟೊಂದು ಜನಗಳ ಜೀವನಕ್ಕೆ ಅನುಕೂಲವಾಗಿದೆ-ಎಂಬುದನ್ನು ನೀವು ಊಹಿಸಿ ತಿಳಿಯಬಹುದು. ಆದರೆ ಜನಸಾಮಾನ್ಯರು ಇನ್ನೂ ಗುರುತಿಸದ ಸಂಪತ್ತಿನ ಎಷ್ಟೋ ಅಂಶ ಈ ಕರಾವಳಿಯಲ್ಲಿದೆ ಎಂದು ತಿಳಿಸಿದರೆ ನಿಮಗೆ ಆಶ್ಚರ್ಯವಾದೀತು. ಅಂಥ ಸಂಪತ್ತೆಂದರೆ ಇಲ್ಲಿನ ಪ್ರಕೃತಿಯಲ್ಲಿ ಕಾಣಸಿಗುವ ಬಗೆ ಬಗೆಯ ವೃಕ್ಷಗಳು, ಪಸು ಹಕ್ಕಿಗಳು ಮತ್ತು ನಮ್ಮ ಸುಖ ಸಂತೋಷಗಳಿಗೆ ಒದಗಬಲ್ಲ ಹಲವು ದಾಣಗಳು. ಇಂದಿನ ನಮಗೆ ಅವು ಏನೆಂಬುದರ ಅರಿವೇ ಇಲ್ಲ. ಹಿಂದೆ ಈ ದೇಶದ ಆಡಳಿತೆ ನಡೆಸುತ್ತಿದ್ದ ಬ್ರಿಟಿಷ್ ಅಧಿಕಾರಿಗಳು ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಗಜೆಟಿಯರುಗಳಲ್ಲಿ ಅವುಗಳ ವಿವರಗಳನ್ನು ಬೇಕಷ್ಟು ಒದಗಿಸಿದ್ದಾರೆ. ನಮ್ಮ ಕಾಡುಗಳಲ್ಲಿ ಎಂಥೆಂಥ ಸಸ್ಯಗಳಿವೆ, ಅವುಗಳಿಂದ ಜನ ಏನೇನು ಪ್ರಯೋಜನ ಪಡೆಯಬಹುದು ಎಂಬುದರ ವಿವರ ಕೊಟ್ಟಿದ್ದಾರೆ. ಕಾಡುಗಳು ಎಂದೊಡನೆಯೆ ನಮಗೆ ಕಾಣಿಸುವ ಪ್ರಯೋಜನ ಅವುಗಳಿಂದ ಸುಡಲು ಕಟ್ಟಿಗೆ ಸಿಗುತ್ತದೆ; ಗೊಬ್ಬರಕ್ಕೆ ಸೊಪ್ಪು ಸಿಗುತ್ತದೆ: ಮನೆಕಟ್ಟಲು ಮರಮಟ್ಟು ಸಿಗುತ್ತವೆ-ಎಂದಿಷ್ಟೇ ಗೊತ್ತು. ಇಂದಿನ ಜನ ಇಲ್ಲಿನ ಕಾಡುಗಳ ವಿಷಯದಲ್ಲಿ ಅಸಡ್ಡೆ ತಾಳಿ, ಮರ ಮಟ್ಟುಗಳನ್ನು ನಾಳಿನ ಯೋಚನೆ ಇಲ್ಲದೆ ಸವರುತ್ತ ಬಂದಿದ್ದಾರೆ. ಮನೆಕಟ್ಟುವ ಗಟ್ಟಿಜಾತಿಯ ಮತ್ತಿ, ಜಂಬೆ, ಹುಣಗಲು, ಬೋಗಿ ಇಂಥ ಮರಗಳು ಮುಗಿಯುತ್ತ ಬಂದಿವೆ. ಇನ್ನಷ್ಟು ಉತ್ತಮ ಜಾತಿಯ ಮರಗಳಾದ ಬೀಟೆ, ಸಾಗುವಾನಿ

ಅಥವಾ ತೇಗ, ಹಲಸು, ಹೆಬ್ಬಲಸು ಮರಗಳೂ ಹೆಸರಿಲ್ಲದಾಗು ತ್ತಿವೆ. ಹೊಸತಾಗಿ ಅವನ್ನು ನಟ್ಟು ಬೆಳೆಯಿಸುವ ಪರಿಪಾಠ ಕಾಣಿಸುತ್ತಲಿಲ್ಲ. ಸಾಮಾನ್ಯ ತೆರನ ನಂದಿ, ಹೊನ್ನೆಯಂಥ ಮರಗಳೂ ಕಡಿದು ಬರಿದಾಗುತ್ತ ಬಂದಿವೆ. ಇಲ್ಲಿನ ಜನಸಂಖ್ಯೆ ಹೆಚ್ಚಿದುದರಿಂದ, ಅಡುಗೆಗೆ ಕಟ್ಟಿಗೆ ಸುಡುವ ಪ್ರಮಾಣ ಇಮ್ಮ ಡಿಯೋ, ಮುಮ್ಮಡಿಯೋ ಆಗಿದೆ. ಸಾಲದುದಕ್ಕೆ, ಹಂಚಿನ ಉದ್ಯಮ ವಿಪರೀತ ಬೆಳೆದು, ಇಟ್ಟಿಗೆ ಮತ್ತು ಹಂಚುಗಳನ್ನು ಸುಡಲು ಇರುವ ಕಾಡುಗಳನ್ನೆಲ್ಲ ಕಟ್ಟಿಗೆಗಾಗಿ ಸವರುತ್ತ ಬಂದಿ ದ್ದಾರೆ. ಯಾವ ಕಾಡಿನ ಮರವಾದರೂ ಹತ್ತಿಪ್ಪತ್ತು ವರ್ಷಗಳ ಅವಧಿಯಲ್ಲಿ ಬೆಳೆಯಲಾರದು. ಇಂದು ನಟ್ಟರೆ, ನಾಳೆ ಸಿಗು ವಂಥದಲ್ಲ. ಕಾಡುಗಳು ಬೆಳೆಯಲು ನೂರಿನ್ನೂರು ವರ್ಷಗಳೇ ಬೇಕು. ಕಾಡುಗಳನ್ನು ಸವರುವಾಗ ನಾಳಿನ ಯೋಚನೆ ಮಾಡದೆ ಹೋದರೆ, ಅವು ಬರಿದಾಗಿ, ಅದರಿಂದ ನಾಳೆ ದಿನ ಮಳೆಯೂ ಕಡಿಮೆಯಾಗುತ್ತದೆ ಎಂಬ ಜ್ಞಾನ ನಮಗಿಲ್ಲ.

ನಮ್ಮ ಹಿಂದಿನ ಜನಗಳಿಗೆ ನಮ್ಮ ಕಾಡಿನ ಸಸ್ಯಗಳಲ್ಲಿ ನಿತ್ಯೋಪಯೋಗಕ್ಕೆ ' ಬರುವ ಹಲವು ಜಾತಿಯ ಮರಗಳ ಗುರುತಿತ್ತು. ಅಣಲೆ, ರಾಮಪತ್ರೆ, ಸೀಗೆ, ರಾಟಳಕದಂಥ ಮರಗಳ ಕಾಯಿಗಳಿಂದ ಜನ ಔಷಧಗಳನ್ನೂ, ಶುಚಿಕಾರಕ ಸಾಮಗ್ರಿಗಳನ್ನೂ ಪಡೆಯುತ್ತಿದ್ದರು. ಔಷಧಗಳಿಗೆ ಬಳಸುವ ನೂರಾರು ಜಾತಿಯ ಗಿಡಮರಗಳ ಪರಿಚಯ ಇಂದಿನ ನಮಗೆ ಇಲ್ಲವಾಗಿದೆ !

ಇದಕ್ಕಿಂತ ಹೆಚ್ಚಾಗಿ ಇಲ್ಲಿನ ಕಾಡುಗಳಲ್ಲಿ ಜೀವಿಸುತ್ತಿರುವ ಅಸಂಖ್ಯ ಪಶುಪಕ್ಷಿಗಳನ್ನು ಕಂಡು ನಾವು ಹೆಚ್ಚಿನ ಸಂತೋಷ ಪಡೆಯುವುದು ಸಾಧ್ಯ. ಹಲವು ನಾಗರಿಕ ದೇಶಗಳ ಜನಗಳು ಅವನ್ನು ಕುರಿತು ಅಭ್ಯಾಸಮಾಡಿ, ಅವನ್ನು ನೋಡಿ ಸಂತೋಷ

ಪಡುತ್ತಾರೆ. ವರ್ಷವೆಲ್ಲಾ ಇಲ್ಲಿಯೇ ಇದ್ದು ಬಾಳುವ ಎಷ್ಟು ನೂರು ಜಾತಿಯ ಹಕ್ಕಿಗಳು ಇಲ್ಲಿಲ್ಲ? ಪರದೇಶಗಳಲ್ಲಿ ಶಾಲೆಯ ಹುಡುಗರೂ ತಮ್ಮ ಬಿಡುವಿನ ಸಮಯವನ್ನು ಹಸುಹಕ್ಕಿಗಳ ಜೀವನ ನೋಡುವುದರಲ್ಲಿ ಕಳೆಯುತ್ತಾರೆ; ಅದರಿಂದ ಆನಂದಿಸುತ್ತಾರೆ. ಯಾವ ಹಕ್ಕಿ ಎಲ್ಲಿ ಕಾಣ ಸಿಗುತ್ತದೆ? ಅದು ಮರಿ ಇಡುವ ಕಾಲ ಯಾವುದು? ಅದು ಬದುಕುವ ರೀತಿ ಹೇಗೆ ಎಂಬ ಸಂಗತಿಗಳು ನಮಗೆ ಗೊತ್ತೇ ಇಲ್ಲ. ಅವುಗಳಲ್ಲಿ ಎಷ್ಟೆಲ್ಲ ಜಾತಿಗಳಿವೆ, ಹೊರಗಿನ ಹಕ್ಕಿಗಳು ಇಲ್ಲಿಗೆ ಎಂದು ಬರುತ್ತವೆ; ಹೋಗುತ್ತವೆ ಎಂಬು ದನ್ನೂ ನಾವು ತಿಳಿಯೆವು. ಇಲ್ಲಿನ ಹಕ್ಕಿಗಳ ಹೆಸರು ಸಹ ನಮಗೆ ತಿಳಿಯದು. ಈ ಜಿಲ್ಲೆಗಳ ಹಳೆಯ ಗಜೆಟಿಯರುಗಳಲ್ಲಿ ಆ ಬಗೆಗೆ ತುಂಬ ವಿವರಗಳು ದೊರೆಯುತ್ತವೆ. ಅದೇ ರೀತಿ, ಇಲ್ಲಿನ ಪ್ರಾಣಿಜೀವನವನ್ನು ನೋಡಿ ಹೋದ ಪರದೇಶೀಯರು ನಮ್ಮ ಹಳ್ಳಕೊಳ್ಳಗಳಲ್ಲಿ ವಾಸಿಸುವ ಹಲವಾರು ಬಗೆಯ ಮೀನುಗಳ ಬಗೆಗೆ ಬರೆದಿದ್ದಾರೆ. ಪರದೇಶದ ಜನರಂತೆ ನಾವು, ನೀವು ಕರಾವಳಿಯ ಒಂದೊಂದು ಮೂಲೆಗೂ ಹೋಗಿ, ಅಲ್ಲಿನ ಸಸ್ಯ ಮತ್ತು ಪಶು ಪ್ರಾಣಿಗಳ ಜೀವನವನ್ನು ಕಂಡು ಆನಂದಿಸ ಬಹುದು. ಗಿಡ ಮರಗಳ ಹೂವುಗಳನ್ನು ಕಂಡು ತೃಪ್ತಿ ತಂದುಕೊಳ್ಳಬಹುದು.

ನಮ್ಮಲ್ಲಿ ಕಡಲಿದೆ, ಅನೇಕ ನದಿಗಳಿವೆ: ಕೆರೆಗಳಿವೆ. ಆದರೆ ಅವುಗಳ ಬಳಿಗೆ ಹೋಗಿ, ಒಂದೆರಡು ದಿನ ಅಲ್ಲಿದ್ದು ಸಂತೋಷ ಪಡುವ ಜನ ಎಷ್ಟಿದ್ದಾರೆ? ಕಡಲಿರುವ ಕೆಲವು ದೇಶಗಳಲ್ಲಿ ನಿತ್ಯ ನಿತ್ಯವೂ ಅದರ ದಂಡೆಗೆ ಹೋಗಿ, ಕಡಲಿ ನಲ್ಲಿ ಈಜಿ, ಮಿಂದು ನಲಿಯುವವರಿದ್ದಾರೆ. ಉದ್ದನೆಯ

ಹಲಗೆಗಳನ್ನು ಕಾಲಿಗೆ ತೊಟ್ಟುಕೊಂಡು, ಕಡಲಿನ ಅಲೆಗಳ ಮೇಲೆ ತೇಲಿ ಆಡುವವರಿದ್ದಾರೆ. ಇಂಥ ಕ್ರೀಡಾಧಾಮಗಳಿಗೆ ಬಂದ ಜನರು ನೀರಿನ ಅಪಾಯಕ್ಕೆ ಗುರಿಯಾಗದಂತೆ ನೋಡಿ ಕೊಳ್ಳುವ ಜೀವರಕ್ಷಕರನ್ನು ನೇಮಿಸಿರುತ್ತಾರೆ. ನದಿ, ಕಡಲು ಗಳಿರುವಲ್ಲಿ ಜನರು ಈಜುಗಾರಿಕೆ, ದೋಣಿಯಾಟಗಳಿಂದ ತೃಪ್ತಿ ಪಡೆಯಬಲ್ಲ ಏರ್ಪಾಟುಗಳೂ ಇರುತ್ತವೆ. ಈ ದೃಷ್ಟಿ ಯಿಂದ ೧೮೦ ಮೈಲು ಉದ್ದದ ಕನ್ನಡ ಕರಾವಳಿಯಲ್ಲಿ ಒಂದೇ ಒಂದು ಕ್ರೀಡಾಧಾಮವನ್ನು ನಡೆಯಿಸುವವರಿಲ್ಲ. ಕಡಲನ್ನು ನೋಡಲು ಹೋದವರು, ಬರಿದೆ ಒಂದೆರಡು ಗಳಿಗೆ ಮರಳಲ್ಲಿ ಓಡಾಡಿ ತಮ್ಮ ಮನೆಗೇ ಹಿಂದಿರುಗಬೇಕಷ್ಟೆ. ಅಲ್ಲಿದ್ದು ಹೆಚ್ಚಿನ ಸಂತೋಷ ಪಡುವುದಕ್ಕೆ ಬಂದೀತು–ಎಂಬ ಬಗೆಗೆ ಶಿಕ್ಷಣ ಕೊಟ್ಟವರೂ ಇಲ್ಲ ; ಕೊಡುವವರೂ ಇಲ್ಲ. ಅದನ್ನೆಲ್ಲ ನೆನೆದರೆ– ನಮ್ಮ ಕರಾವಳಿಯು ಸೊಬಗು ಮಂಗನ ಮುಂದೆ ಚೆಲ್ಲಿದ ಮಾಣಿಕ್ಯದಂತಾಗಿದೆ.

ನಮ್ಮ ಕರಾವಳಿಗೆ ಕೇವಲ ೨೦ ಮೈಲು ದೂರದಲ್ಲಿ ಗೋವೆ ಇದೆ. ಆ ಗೋವೆಯನ್ನು ಮೊನ್ನೆ ಮೊನ್ನೆಯ ತನಕ ಪೋರ್ಚುಗೀಸರು ಆಳುತ್ತಿದ್ದರು. ಅಲ್ಲಿಯೂ ಸುಂದರವಾದ ಸಮುದ್ರ ತೀರವಿದೆ. ಅವುಗಳಲ್ಲಿ 'ಕೊಲ್ವಾ' ಎಂಬುದು ಹದಿನೆರಡು ಮೈಲು ಉದ್ದದ ಒಂದು ಕಡಲ ತೀರ. ಆ ತೀರಕ್ಕೆ ಪ್ರತಿ ಸಂಜೆಯೂ ಸಾವಿರಾರು ಮಂದಿ ಬಂದು ಆನಂದಪಟ್ಟು ಮರಳುತ್ತಾರೆ. ಅಲ್ಲಿಗೆ ಪೇಟೆಯವರೂ ಬರು ತ್ತಾರೆ ; ಹಳ್ಳಿಯವರೂ ಬರುತ್ತಾರೆ. ಈ ತಾವಿನಿಂದ ೨೦ ಮೈಲು ದಕ್ಷಿಣಕ್ಕಿರುವ ಕಾರವಾರದ ಕಡಲ ದಂಡೆಯಲ್ಲಿ ಸಂಜೆಹೊತ್ತು ನೂರು ಮಂದಿ ಸಂತೋಷಕ್ಕಾಗಿ ಬರುವು ದನ್ನು ಕಾಣಲಾರೆವು. ಅಲ್ಲಿನ ಮರಳಿನ ದಂಡೆಯ ಮೇಲೆ

ಕುಳಿತುಕೊಳ್ಳುವುದೂ ಅಪಾಯಕರ. ಆ ಜಾಗವನ್ನು ಜನ ಹೊಲಸು ಮಾಡುವುದಕ್ಕೂ ಬಳಸುತ್ತಾರೆ. ಕೊಲ್ವಾಕ್ಕೂ ಕಾರವಾರಕ್ಕೂ ಇಂತಹ ವ್ಯತ್ಯಾಸ ಏಕೆ ಬಂದಿತು ?

ಗೋವೆಯನ್ನು ಆಳಿದ ಪೋರ್ಚುಗೀಸರು ನಿಸರ್ಗ ಪ್ರಿಯರು, ಹಾಡುವುದರಲ್ಲಿ, ಆಡುವುದರಲ್ಲಿ ಆಸಕ್ತರು. ಅವರು ಕಲಿಸಿದ ಪಾಠ ಗೋವೆಯ ಜನರಿಗೆ ಬಂದಿದೆ. ನಮಗೆ ಅಂಥ ಪಾಠವನ್ನು ಕಲಿಸಿದವರಿಲ್ಲ. ನಮಗೆ ನಮ್ಮ ವಿರಾಮ ಕಾಲವನ್ನು ಕಳೆಯಲು ಬೇಕಾದಂಥ ವಿದ್ಯೆಯೇ ಗೊತ್ತಿಲ್ಲ-ಎಂದರೂ ಸರಿಯೆ. ಯಾವುದೇ ನಾಡಿನಲ್ಲಿದ್ದು ಸುಖಪಡಬೇಕಾದರೆ ಅಲ್ಲಿನ ಪ್ರಕೃತಿಯ ಸಂಪತ್ತನ್ನು ಕುರಿತು ಜನ ಆಳವಾಗಿ ಅಭ್ಯಾಸ ಮಾಡಬೇಕು. ಆಗ ಜೀವನ ನಡೆಯಿಸುವ ಕೆಲಸ ಸುಲಭವಾಗುತ್ತದೆ ; ಜೀವನದಲ್ಲಿ ಸಂತೋಷ ತಂದುಕೊಳ್ಳುವುದೂ ಸುಲಭವಾಗುತ್ತದೆ.



